# ತೀರ್ಪು

## ದೇವರ ತೀರ್ಪು

### (The Judgement Of God)




ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

www.thraithashakam.org





# ತ್ರೈಸಿದ್ಧಾಂತ ಕೀರ್ತಿ

## ದೇವರ ತೀರ್ಪು

## *(The Judgement Of God)*


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016

ಪ್ರತಿಗಳು : 1000 **ಬೆಲೆ. 70/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ – ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ - ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ- ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ-ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ - ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು- ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು- ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು-ಆನಂದಮು.
81. ದಶ-ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು- ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು- ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು- ಆರು-ತೊಮ್ಮಿದಿ
89. 6-3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ-ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು-ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ-ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು - ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು-ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು-ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : **ಶ್ರೀನಿವಾಸ**–09705864675, **ಲಕ್ಷ್ಮಿನಾರಾಯಣಾಚಾರಿ**–09440556968.
**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ.–38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆಂಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ತೀರ್ಪು (ದಿ ಜಡ್ಜ್‌ಮೆಂಟ್ ಆಫ್ ಗಾಡ್) 

ತೀರ್ಪು ಎಂದರೆ ನಿರ್ಣಯಿಸಿರುವುದು ಎಂದು ಅರ್ಥ. ಇನ್ನೂ ವಿವರವಾಗಿ ಹೇಳಿಕೊಂಡರೆ ಒಂದು ವಿಷಯದಲ್ಲಿ ತಪ್ಪು ಒಪ್ಪುಗಳನ್ನು ಲೆಕ್ಕಿಸಿ, ಯಾವುದು ತಪ್ಪೋ, ಯಾವುದು ಒಪ್ಪೋ ವಿವರಿಸುವುದೇ ಅಲ್ಲದೆ, ಒಪ್ಪಿಗೆಗೆ ಅಕ್ಷಯನ್ನು ತಪ್ಪಿಗೆ ಶಿಕ್ಷೆಯನ್ನು  ನಿರ್ಣಯಿಸಿ ಹೇಳುವುದನ್ನು ತೀರ್ಪು ಎನ್ನುತ್ತಿದ್ದೇವೆ.  ಉದಾಹರಣೆಗೆ ನ್ಯಾಯಸ್ಥಾನವನ್ನು (ಕೋರ್ಟನ್ನು) ಎಲ್ಲರೂ ನೋಡಿಯೇ ಇರುತ್ತಾರೆ.  ನ್ಯಾಯಸ್ಥಾನದಲ್ಲಿ (ಕೋರ್ಟಿನಲ್ಲಿ) ಒಬ್ಬ ನ್ಯಾಯ ಮೂರ್ತಿ (ಜಡ್ಜ್) ಇರುತ್ತಾನೆ. ಜಡ್ಜ್ ಮುಂದೆ ಅಪರಾಧಿ ಇರುತ್ತಾನೆ. ಅಪರಾಧಿ ಮಾಡಿದ ಕೆಲಸದಲ್ಲಿ ಒಳ್ಳೆಯ ಕೆಟ್ಟದ್ದನ್ನು ಅಪರಾಧಿಯಿಂದಾಗಲಿ, ಅಪರಾಧಿ ಆಯ್ಕೆಮಾಡಿಕೊಂಡ ನ್ಯಾಯವಾದಿ (ಅಡ್ವಕೇಟ್) ಯಿಂದಾಗಲಿ ವಿವರಿಸಲಾ ಗುತ್ತದೆ. ಪೂರ್ತಿ ವಿಚಾರಣೆ ನಡೆದ ನಂತರ ನ್ಯಾಯಮೂರ್ತಿ (ಜಡ್ಜ್) ತನಗೆ ತಿಳಿದ ಕಾನೂನಿನ ಪ್ರಕಾರ ಅದರಲ್ಲಿನ ತಪ್ಪು ಒಪ್ಪುಗಳನ್ನು ಗ್ರಹಿಸಿ ತೀರ್ಪು ಹೇಳುತ್ತಾನೆ. ಹೊರಗೆ ಕಾಣಿಸುವ ಕೋರ್ಟ್‌ಗಳು ಮನುಷ್ಯರು ತಯಾರು ಮಾಡಿಕೊಂಡಿರುವವೆ, ಇವುಗಳನ್ನು ಉದಾಹರಣೆಗೆ ಮಾತ್ರ ಹೇಳಿದ್ದೇವೆ.

ವಾಸ್ತವಕ್ಕೆ ನಮಗೆ ಕಾಣಿಸದ ನ್ಯಾಯಸ್ಥಾನ ಒಂದು ಇದೆ. ಅದು ಅತ್ಯಂತ ದೊಡ್ಡ ನ್ಯಾಯಸ್ಥಾನ. ಆ ನ್ಯಾಯಸ್ಥಾನದಲ್ಲಿ ಕುಲ ಮತ ಭೇದಗಳು ಇಲ್ಲದಂತೆ ಎಲ್ಲಾ ಮತದವರು ವಿಚಾರಿಸಲ್ಪಡುವರು. ವಿಶೇಷ ಏನೆಂದರೆ ನ್ಯಾಯಸ್ಥಾನ ಕಾಣಿಸುವುದಿಲ್ಲ, ತೀರ್ಪು ಹೇಳುವ ನ್ಯಾಯಮೂರ್ತಿ ಕಾಣಿಸುವು ದಿಲ್ಲ. ಕಾಣಿಸದ ನ್ಯಾಯಸ್ಥಾನದಲ್ಲಿ, ಕಾಣಿಸದ ದೇವರೇ ನ್ಯಾಯಮೂರ್ತಿ ಯಾಗಿರುತ್ತಾನೆ. ಯಾವ ತೀರ್ಪು ಆದರೂ ದೇವರ ಮೂಲಕವೇ ಬರುತ್ತದೆ. ಆದ್ದರಿಂದ ಅದನ್ನು ದೇವರ ತೀರ್ಪು ಎನ್ನಬಹುದು. ಅದನ್ನೇ ಕೆಲವರು **"ದಿ ಜಡ್ಜ್‌ಮೆಂಟ್ ಆಫ್ ಗಾಡ್"** ಎನ್ನುತ್ತಾರೆ. ಕಾಣಿಸದ ನ್ಯಾಯಸ್ಥಾನದಲ್ಲಿ ಹೇಗೆ ವಿಚಾರಣೆ ನಡೆಯುತ್ತದೊ, ಹೇಗೆ ತೀರ್ಪು ಮಾಡಲಾಗುತ್ತದೋ ಯಾರಿಗೂ ತಿಳಿಯದು. ತೀರ್ಪಿನಲ್ಲಿ ಶಿಕ್ಷೆ ಏನು ಎಂಬ ವಿಷಯವೂ ಸಹ ಯಾರಿಗೂ ತಿಳಿಯದು. ವಿಚಾರಣೆಯಾಗಲಿ, ತೀರ್ಪಾಗಲಿ, ಶಿಕ್ಷೆಯಾಗಲಿ ಇಲ್ಲವೇ

ಅಕ್ಷಯಾಗಲಿ ಯಾರಿಗೂ ತಿಳಿಯದು. ಆದರೆ ತೀರ್ಪು ಮಾಡಲಾದ ಶಿಕ್ಷೆ ಮಾತ್ರ ತಪ್ಪದೆ ಯಾರಾದರೂ ಅನುಭವಿಸಬೇಕಾಗಿದ್ದೇ. ಹೊರಗಿನ ಕೋರ್ಟಿನಲ್ಲಿ ವಿಚಾರಣೆ, ತೀರ್ಪು, ಶಿಕ್ಷೆ ಮೊದಲೆ ತಿಳಿಯುತ್ತದೆ. ಒಬ್ಬ ಅಪರಾಧಿಗೆ ಗಲ್ಲು ವಿಧಿಸಿದರೆ, ಆ ಅಪರಾಧಿಗೆ ಅದು ಮೊದಲೆ ತಿಳಿಯುತ್ತದೆ. ಹಾಗೇ ಜೈಲು ಶಿಕ್ಷೆಯಾಗಲಿ ಮೊದಲೇ ತಿಳಿಯುತ್ತದೆ. ಆದರೆ ಕಾಣಿಸದ ಒಳಗಿನ ಕೋರ್ಟಿನಲ್ಲಿ ವಿಧಿಸಿದ ಶಿಕ್ಷೆ ಜಾರಿಯಾಗುವುದಕ್ಕೆ ಒಂದು ಕ್ಷಣದ ಮುಂಚೆಯೂ ಸಹ ತಿಳಿಯುವುದಿಲ್ಲ.

ಇಲ್ಲಿ ಕೆಲವರಿಗೆ ಒಂದು ಪ್ರಶ್ನೆ ಬರಬಹುದು, ಅದೇನೆಂದರೆ! ಕೋರ್ಟಿನ ಬಗ್ಗೆಯಾಗಲಿ, ಜಡ್ಜಿನ ಬಗ್ಗೆಯಾಗಲಿ, ಶಿಕ್ಷೆಯ ಬಗ್ಗೆಯಾಗಲಿ ಕೇಳಿದ್ದೇವೆ, ಆದರೆ 'ಅಕ್ಷ' ಎನ್ನುವ ಪದವನ್ನು ಕುರಿತು ಎಂದಿಗೂ ಕೇಳಲಿಲ್ಲ, ಹಾಗೆಯೇ ಅದು ಹೇಗೆ ಜಾರಿ ಆಗುತ್ತದೋ ಸಹ ತಿಳಿದಿಲ್ಲ, ಅಷ್ಟಕ್ಕೂ ಅದು ಏನು? ಎಂದು ಪ್ರಶ್ನಿಸಬಹುದು. ಅದಕ್ಕೆ ನನ್ನ ಅಧಿಕಾರಿಯಾದ ಆತ್ಮ ನನ್ನ ಮುಖಾಂತರ ಹೀಗೆ ತಿಳಿಸುತ್ತಿದೆ. ಆದ್ದರಿಂದ ನಾವು (ನನ್ನ ಆತ್ಮ+ನಾನು) ಇಬ್ಬರೂ ಹೇಳುವುದೇನೆಂದರೆ! "ಕ್ಷ" ಅನ್ನುವ ಶಬ್ದ ನಾಶವನ್ನು ಸೂಚಿಸುತ್ತದೆ. ಶಿಕ್ಷೆ ಅಂದರೆ ನಾಶಕ್ಕೆ ಸಂಬಂಧಿಸಿರುವುದೆಂದು ಅರ್ಥ. ಶಾರೀರಕವಾಗಾಗಲಿ, ಮಾನಸಿಕವಾಗಾಗಲಿ ಹೊಂದುವ ನಾಶವನ್ನು ಶಿಕ್ಷೆ ಎನ್ನುತ್ತೇವೆ, ಶರೀರ ಮತ್ತು ಮಾನಸಿಕ ನಾಶವು ದುಃಖದಿಂದ ಕೂಡಿಕೊಂಡಿರುತ್ತದೆ. ಅಂತಹ ದುಃಖ ಉಂಟಾಗುವುದನ್ನು ಶಿಕ್ಷೆ ಎನ್ನುತ್ತೇವೆ. ಹೊರಗೆ ಕಾಣಿಸುವ ಕೋರ್ಟನ್ನು ನ್ಯಾಯಸ್ಥಾನವಾಗಿ, ಅದರಲ್ಲಿನ ಜಡ್ಜ್‌ನ್ನು ನ್ಯಾಯಮೂರ್ತಿಯಾಗಿ ಹೇಳಿ ಕೊಂಡಿದ್ದೇವೆ. ಇದು ಉದಾಹರಣೆ ಮಾತ್ರವೆ. ನಿಜಕ್ಕೆ ನ್ಯಾಯಸ್ಥಾನ ಶರೀರದಲ್ಲಿಯೇ ಇದೆ. ಅದರಲ್ಲಿ ನ್ಯಾಯಮೂರ್ತಿ ಯಾರೋ ಯಾರಿಗೂ ತಿಳಿದಿಲ್ಲ. ಆತನನ್ನು ಯಾರೂ ನೋಡಲಿಲ್ಲ. ದಂಡನಾಧಿಕಾರಿಯಾಗಿ ಒಬ್ಬನಿದ್ದಾನೆನ್ನುವುದಕ್ಕೆ ನಿರೂಪಣೆಯಾಗಿ ಭಗವದ್ಗೀತಾ ಗ್ರಂಥದಲ್ಲಿ ವಿಭೂತಿ ಯೋಗವೆಂಬ ಅಧ್ಯಾಯದಲ್ಲಿ 29ನೇ ಶ್ಲೋಕದಲ್ಲಿ "ಯಮ ಸ್ಸಂಯಮತಾ

ಮಹಮ್" ಅನ್ನುವ ವಾಕ್ಯವು ಇದೆ. ಅದರ ಅರ್ಥ **"ಶಿಕ್ಷಿಸುವವರಲ್ಲಿ ಯಮನು ನಾನು"** ಎಂದು ಇದೆ. ಯಮ ಎಂದರೆ ಆತನು ಎಲ್ಲಿಯೋ ಪ್ರತ್ಯೇಕವಾದ ಯಮಲೋಕದಲ್ಲಿ ಇರುತ್ತಾನೆಂದು, ಆತನು ಒಂದು ಪ್ರತ್ಯೇಕವಾದ ವ್ಯಕ್ತಿ ಎಂದು ಅಂದುಕೊಳ್ಳಬೇಡಿ. ಪುರಾಣ ಕಥೆಗಳಿಗೆ ಹೋಗದಂತೆ, ಆಧ್ಯಾತ್ಮಿಕ ವಿಷಯ ದೊಳಗೆ ಬಂದು ನೋಡಿದರೆ, ನಮ್ಮ ಶರೀರದಲ್ಲಿ ಕಾಣಿಸದೆ ಇರುವವನೇ ನಿಜವಾದ ಯಮನೆಂದು ತಿಳಿಯುತ್ತದೆ. ಯಾವ ತಪ್ಪಿಗೆ ಯಾವ ಶಿಕ್ಷೆಯೋ ಅದನ್ನು ಮೊದಲೆ 'ದೇವರು' ಎನ್ನುವ ಯಮನು ಆದಿಯಲ್ಲಿಯೇ ನಿರ್ಣ ಯಿಸಿದ್ದಾನೆ. ತಪ್ಪುಗಳಿಗೆ ಶಿಕ್ಷೆಗಳು ಮೊದಲೆ ನಿರ್ಣಯಿಸಲ್ಪಟ್ಟಿವೆ. ಅವುಗಳ ಪ್ರಕಾರ ಮನುಷ್ಯ ಮಾಡಿದ ತಪ್ಪೇನೋ ಗ್ರಹಿಸಿ ಅದಕ್ಕೆ ತಕ್ಕಂತೆ ಶಿಕ್ಷೆಯನ್ನು ಜಾರಿ ಮಾಡುವವನು ಮತ್ತೊಬ್ಬನು ಇದ್ದಾನೆ. ಸೃಷ್ಠಿಗಿಂತ ಮೊದಲೆ ಎಲ್ಲಾ ದೇವರಿಂದ ನಿರ್ಣಯಿಸಲ್ಪಟ್ಟಿವೆ. **ಸೃಷ್ಠಿ ನಂತರ ದೇವರು ಕೆಲಸ ಮಾಡದವನಾಗಿ, ರೂಪ ಇಲ್ಲದವನಾಗಿ, ಹೆಸರು ಇಲ್ಲದವನಾಗಿ ಇದ್ದಾನೆಂದು ಯಾರೂ ಮರೆಯಬಾರದು.** ಆಧ್ಯಾತ್ಮಿಕ ಕಾನೂನಿನ ಪ್ರಕಾರ (ಧರ್ಮದ ಪ್ರಕಾರ) ದೇವರು ರೂಪ, ನಾಮ, ಕ್ರಿಯೆಗಳು ಇಲ್ಲದವನೆಂದು ಜ್ಞಾಪಕ ಇಟ್ಟುಕೊಳ್ಳಬೇಕು. ದೇವರು ಎಲ್ಲದಕ್ಕೂ ಅತೀತನಾಗಿದ್ದಾನೆ. ವಿಶ್ವವೆಲ್ಲವನ್ನು ಸೃಷ್ಠಿಸಿದವನು, ಪಾಲಿಸುವವನು, ನಾಶ ಮಾಡುವವನು ದೇವರೇ ಆದರೂ, ಆ ಏರ್ಪಾಟುಗಳೆಲ್ಲವನ್ನು ದೇವರು ಸೃಷ್ಠಿಗೆ ಪೂರ್ವದಲ್ಲಿಯೇ ತಯಾರುಮಾಡಿಟ್ಟಿದ್ದಾನೆ. ಆದ್ದರಿಂದ ದೇವರನ್ನು ಸೃಷ್ಠಿ, ಸ್ಥಿತಿ, ಲಯಗಳಿಗೆ ಕಾರಣಭೂತನೆಂದು ಹೇಳಬಹುದು. ಇದೇ ವಿಷಯ ಎಲ್ಲರಿಗೂ ತಿಳಿಯುವಂತೆ ಪ್ರಪಂಚ ಭಾಷೆಯಾದ ಆಂಗ್ಲ ಭಾಷೆಯಲ್ಲಿ ದೇವರನ್ನು God (ಗಾಡ್) ಎನ್ನುವ ಮೂರಕ್ಷರಗಳ ಸಮ್ಮೇಳನದಿಂದ ಹೇಳುವುದು ನಡೆದಿದೆ. ದೇವರು ಸೃಷ್ಟಿಯನ್ನು ತಯಾರು ಮಾಡಿದವನು ಆದ್ದರಿಂದ ಆತನನ್ನು Genarator(ಜನರೇಟರ್) ಎಂದು ಇಂಗ್ಲೀಷ್ ಭಾಷೆಯಲ್ಲಿ ಹೇಳಬಹುದು. ಹಾಗೇ ಪಾಲಿಸುವವನನ್ನು Operator (ಅಪರೇಟರ್) ಎಂದು ಕರೆಯಬಹುದು. ಹಾಗೇ ಲಯ ಮಾಡುವವನು ಅಥವಾ ನಾಶ ಮಾಡುವವನನ್ನು Destroyer (ಡಿಷ್ಟ್ರಾಯರ್) ಎಂದು ಹೇಳಬಹುದು. ದೇವರು ಜನರೇಟರ್, ಅಪರೇಟರ್,

ಡಿಷ್ಟ್ರಾಯರ್ ಆದ್ದರಿಂದ ಆತನಿಗೆ ಗುರುತಾಗಿ Generator ಪದದಿಂದ ಮೊದಲ ಅಕ್ಷರವಾದ "G" ಅನ್ನು ತೆಗೆದುಕೊಂಡು, ನಂತರ ಪದವಾದ Operator ಪದದಿಂದ ಮೊದಲ ಅಕ್ಷರ "O" ಅನ್ನು ತೆಗೆದುಕೊಂಡು, ಕೊನೆಯ Destroyer ಅನ್ನುವ ಪದದಿಂದ ಮೊದಲ ಅಕ್ಷರವಾದ "D" ಅನ್ನುವ ಅಕ್ಷರವನ್ನು ತೆಗೆದುಕೊಂಡು ಮೂರಕ್ಷರಗಳನ್ನು ಕೂಡಿಸಿ "GOD" ಅಂದಿದ್ದಾರೆ. ಗಾಡ್ (GOD) ಅನ್ನುವ ಮೂರು ಅಕ್ಷರಗಳ ಸಮ್ಮೇಳನ ಸೃಷ್ಟಿ, ಸ್ಥಿತಿ, ಲಯ ಕರ್ತನಾದ ದೇವರಿಗೆ ಗುರುತಾಗಿ ಇದೆ, ಅಷ್ಟೇಯಾಗಲಿ ಅದು ವಾಸ್ತವಕ್ಕೆ ಹೆಸರಲ್ಲ. ದೇವರಿಗೆ ಹೆಸರು ಇಲ್ಲ. ಆತನಿಗಿರುವ ದೊಡ್ಡತನಕ್ಕೆ ಸಂಬಂಧಿಸಿದ ಬಿರುದುಗಳನ್ನು ಗಾಡ್ ಎಂದು, ದೇವರೆಂದು, ಪರಮಾತ್ಮನೆಂದು, ಈಶ್ವರನೆಂದು, ಪುರುಷೋತ್ತಮನೆಂದು, ಸರ್ವಾಂತರ್ಯಾಮಿ ಎಂದು, ಸರ್ವಧಾರಿ ಎಂದು, ಸೃಷ್ಟಿಕರ್ತನೆಂದು, ಆದಿಮಧ್ಯಾಂತ ರಹಿತನೆಂದು, ವಿಶ್ವವ್ಯಾಪಿ ಎಂದು ಎಷ್ಟೋ ಬಿರುದುಗಳಿಂದ ಕರೆಯುವುದು ನಡೆಯುತ್ತಿದೆ.

ಯಾರ ಊಹೆಗು ಸಿಗದವನು ದೇವರು, ಯಾರಿಗೂ ತಿಳಿಯದವನು ದೇವರು. ಎಲ್ಲದಕ್ಕೂ ಕಾರಣಕರ್ತನಾದ ದೇವರನ್ನು ಆಂಗ್ಲಭಾಷೆಯಲ್ಲಿ GOD (ಗಾಡ್) ಎಂದರೂ, ಕನ್ನಡ ಭಾಷೆಯಲ್ಲಿ ಎಲ್ಲರಿಗೂ ಪರಿಚಯವಿರುವ ದೇವರು ಅನ್ನುವ ಬಿರುದಿನಿಂದಲೇ ನಾವು ಹೇಳಿಕೊಳ್ಳೋಣ. ದೇವರು ಮೂಲ ಪುರುಷನಾಗಿದ್ದರೂ ಏನು ಮಾಡದವನಾಗಿದ್ದಾನೆ. ಅಂತಹದರಲ್ಲಿ ಪ್ರಸ್ತುತ ಮನುಷ್ಯ ಮಾಡುತ್ತಿರುವ ತಪ್ಪುಗಳನ್ನು ಗುರುತಿಸಿ ಅದಕ್ಕೆ ದೇವರು ನಿರ್ಣಯಿಸಿದ ಕಾನೂನು ಅಥವಾ ಧರ್ಮದ ಪ್ರಕಾರ ಶಿಕ್ಷೆಗಳನ್ನು ಜಾರಿ ಮಾಡುವವನು ಮತ್ತೊಬ್ಬನು ಇದ್ದಾನೆಂದು ಹೇಳಿದ್ದೇವಲ್ಲವೆ! ಆ ಎರಡನೆಯವನು ಮನುಷ್ಯ ಮಾಡುತ್ತಿರುವ ತಪ್ಪುಗಳನ್ನು ಪಾಪಗಳಾಗಿ ಗುರುತಿಸಿ ಲಿಖಿಸಿಕೊಂಡು, ನಂತರ ಆ ಪಾಪಗಳಿಗೆ ಪರಿಹಾರವಾಗಿ ಶಿಕ್ಷೆಗಳನ್ನು ಅನೇಕ ವಿಧಗಳಾಗಿ ಜಾರಿ ಮಾಡುತ್ತಿದ್ದಾನೆ. ಅದೇ ವಿಧವಾಗಿ ಮನುಷ್ಯ ಮಾಡುತ್ತಿರುವ ಒಪ್ಪುಗಳನ್ನು ಪುಣ್ಯಗಳಾಗಿ ಗುರುತಿಸಿ ಲಿಖಿಸಿಕೊಂಡು, ನಂತರ ಆ ಪುಣ್ಯಗಳಿಗೆ ಪರಿಹಾರವಾಗಿ

ಎಷ್ಟೋ ವಿಧಗಳ ಅಕ್ಷಗಳನ್ನು ಸಹ ಜಾರಿ ಮಾಡುತ್ತಿದ್ದಾನೆ. ಶಿಕ್ಷೆಗಳನ್ನಾಗಲಿ, ಅಕ್ಷಗಳನ್ನಾಗಲಿ ಮೊದಲೆ ನಿರ್ಣಯಿಸಿದವನು ಮೊದಲನೆಯವನಾದ ಯಮನು (ದೇವರು) ಆಗಿದ್ದು, ಅವುಗಳನ್ನು ಜಾರಿ ಮಾಡುವವನು ಎರಡನೆಯವನಾದ ಚಿತ್ರಗುಪ್ತನು. ಯಮನು, ಚಿತ್ರಗುಪ್ತನು ಎನ್ನುವ ಹೆಸರುಗಳನ್ನು ಕೇಳಿದವರು ಕೆಲವರಿದ್ದರೂ, ಅವರ ಭಾವನೆಯಲ್ಲಿ ಯಮಲೋಕದಲ್ಲಿ ಯಮನಿದ್ದಾನೆಂದೂ, ಹಾಗೆಯೇ ಚಿತ್ರಗುಪ್ತನು ಇದ್ದಾನೆಂದು ಪುರಾಣ ಕಥೆಗಳನ್ನನುಸರಿಸಿ ಅಂದು ಕೊಳ್ಳುವುದು ನಡೆಯುತ್ತಿದೆ.

ಆದರೆ ಇಲ್ಲಿ ಮುಖ್ಯವಾಗಿ ತಿಳಿದುಕೊಳ್ಳಬೇಕಾಗಿರುವುದು ಏನೆಂದರೆ! ಕನ್ನಡದಲ್ಲಿ "ಹುಡುಕಿದರೂ ಸಿಗದೆ ಇರುವವನು ದೇವರು ಅಥವಾ ಹುಡುಕಲ್ಪಡುವವನು ದೇವರು" ಎಂದು ಅರ್ಥವನ್ನು ಕೊಡುವ ಪದವಿದ್ದರೂ, ಆಂಗ್ಲಭಾಷೆಯಲ್ಲಿ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಕನೆಂದು ಅರ್ಥಕೊಡುವ GOD (ಗಾಡ್) ಇದ್ದರೂ, ದಂಡನಾಧಿಕಾರಿಯಾದ್ದರಿಂದ ದೇವರನ್ನು 'ಯಮ' ಎಂದು ಕರೆಯುತ್ತಿದ್ದೇವೆ. 'ಯಮ' ಅನ್ನುವ ಪದ ದೇವರಿಗೇ ಅನ್ವಯಿಸುತ್ತದೆ. ಒಬ್ಬ ಮನುಷ್ಯ ಉನ್ನತ ಉದ್ಯೋಗಿ ಯಾದರೂ, ದೇಶಕ್ಕೆ ರಾಜನಾದರೂ, ಮಂತ್ರಿಯಾದರೂ, ಯಾವ ಪದವಿಯಲ್ಲಿ ಇದ್ದರೂ, ಅವನು ಮೂರನೆಯವನಾದ ಜೀವಾತ್ಮ ಮಾತ್ರವೇ ಆಗುತ್ತಾನೆ. ಮೊದಲನೆಯವನು ಎಲ್ಲದಕ್ಕೂ ಕಾರಣನಾದ ಪರಮಾತ್ಮ (ದೇವರು) ನಾಗಿದ್ದು, ಎರಡನೆಯವನು ಎಲ್ಲವನ್ನು ಜಾರಿ ಮಾಡುವ ಚಿತ್ರಗುಪ್ತನಾಗಿ ಇದ್ದಾನೆ. ವಿವರವಾಗಿ ಹೇಳಿಕೊಂಡರೆ ಮೊದಲನೆಯವನು ಮೂಲಪುರುಷನಾದ ಯಮನಾಗಿದ್ದು, ಶಿಕ್ಷೆಗಳನ್ನು, ಅಕ್ಷಗಳನ್ನು ಎಲ್ಲವನ್ನು ಜಾರಿ ಮಾಡುವವನು ಚಿತ್ರಗುಪ್ತನೆನ್ನುವ ಎರಡನೆಯವನೆಂದು ಹೇಳಬಹುದು. ಇನ್ನು ಮೂರನೆಯವನು ಮನುಷ್ಯನ ಶರೀರದೊಳಗೆ ಇದ್ದು ಶಿಕ್ಷೆಗಳನ್ನು ನರಕವಾಗಿ, ಅಕ್ಷಗಳನ್ನು ಸ್ವರ್ಗವಾಗಿ ಅನುಭವಿಸುವವನು ಜೀವಿಯೆಂದು ಹೇಳಬಹುದು.

ವಿಶ್ವದಲ್ಲಿ ಪುರುಷತತ್ತ್ವ ಇರುವವರು ಮೂವರು ಮಾತ್ರವೇ ಇದ್ದಾರೆ. ಆ ಮೂವರಲ್ಲಿ ಕೊನೆಯ ಪುರುಷನು ಇಲ್ಲವೇ ಮೂರನೇ ಪುರುಷನು ಜೀವಾತ್ಮನಾಗಿದ್ದಾನೆ. ಎರಡನೇ ಪುರುಷನು ರಹಸ್ಯವಾಗಿ ಗುಪ್ತಾತ್ಮನಾಗಿದ್ದಾನೆ. ಇನ್ನು ಮೊದಲ ಪುರುಷನೇ ಮೂರನೆಯ ಪುರುಷನಿಗಿಂತ, ಎರಡನೇ ಪುರುಷನಿಗಿಂತ ಉತ್ತಮನಾದ ಪುರುಷೋತ್ತಮನಾಗಿದ್ದಾನೆ. ಆದ್ದರಿಂದ ಆದಿ ಪುರುಷನಾದ ದೇವರನ್ನು ಪುರುಷೋತ್ತಮ ಎಂದು ಸಹ ಅಂದಿದ್ದಾರೆ. ಅಕ್ಷಕ್ಕೆ ಅರ್ಥವನ್ನು ಹೇಳಿಕೊಳ್ಳುವುದಕ್ಕೆ ಮೊದಲು ಇವೆಲ್ಲವನ್ನು ಹೇಳಿಕೊಳ್ಳಬೇಕಾದ ಅವಶ್ಯಕತೆ ಇದೆ. ಈ ಮೂವರು ಪುರುಷರನ್ನು ಬಿಡಿಸಿ ಹೇಳುತ್ತಾ ನಾವು **"ತ್ರೈತ ಸಿದ್ಧಾಂತವನ್ನು"** ಪ್ರತಿಪಾದಿಸಿದ್ದೇವೆ. ತ್ರೈತ ಸಿದ್ಧಾಂತ ಜ್ಞಾನ ಜ್ಞಾನಗಳಿಗೆಲ್ಲ ಉತ್ತಮವಾದ ಜ್ಞಾನವೆಂದು ಗರ್ವದಿಂದ ಹೇಳುತ್ತಿದ್ದೇನೆ. ಇದೇ ತ್ರೈತಸಿದ್ಧಾಂತ ವನ್ನು ಇಂದೂತ್ವಕ್ಕೆ ಮೂಲ ಗ್ರಂಥವಾದ ಭಗವದ್ಗೀತೆಯಲ್ಲಿ ನೋಡಿದರೆ, ಪುರುಷೋತ್ತಮಪ್ರಾಪ್ತಿ ಯೋಗದಲ್ಲಿ 16, 17, 18 ಶ್ಲೋಕಗಳಲ್ಲಿ ಹೀಗೆ ಇದೆ.

***16 ಶ್ಲೋ :*** ***ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವಚ ।***
***ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಕ್ಷರ ಉಚ್ಯತೇ ॥***

**ಭಾವಾರ್ಥ :–** ಲೋಕದಲ್ಲಿ ಎರಡು ವಿಧಗಳ ಪುರುಷರಿದ್ದಾರೆ. ಅವರನ್ನೇ ಕ್ಷರನು, ಅಕ್ಷರನೆಂದು ಹೇಳುತ್ತಿದ್ದೇವೆ. ಕ್ಷರನು ಸರ್ವಜೀವ ಶರೀರಗಳಲ್ಲಿ ಇದ್ದಾನೆ. ಅವನ ಜೊತೆ ಅಕ್ಷರನು ಸಹ ಇದ್ದಾನೆ.

***17 ಶ್ಲೋ :*** ***ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇ ತ್ಯುದಾಹೃತಃ ।***
***ಯೋ ಲೋಕತ್ರಯ ಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥***

**ಭಾವಾರ್ಥ :–** ಪರಮಾತ್ಮ ಎನ್ನುವ ಪುರುಷನು ಸಹ ಮತ್ತೊಬ್ಬನು ಇದ್ದಾನೆ. ಅವನನ್ನೇ ಉತ್ತಮ ಪುರುಷನೆಂದು ಅನ್ನುತ್ತಿದ್ದೇವೆ. ಮೂರುಲೋಕಗಳನ್ನು ಆವರಿಸಿ ಅವುಗಳನ್ನು ನಿಭಾಯಿಸುವ ಉತ್ತಮ ಪುರುಷನನ್ನು ಈಶ್ವರನೆನ್ನುತ್ತಿದ್ದೇವೆ.

***18 ಶ್ಲೋ :*** ***ಯಸ್ಮಾತ್ ಕ್ಷರ ಮತೀತೋಹ ಮಕ್ಷರಾದಪಿ ಚೋತ್ತಮಃ ।***
***ಅತೋಸ್ಮಿಲೋಕೇ ವೇದೇಚ ಪ್ರಥಿತಃ ಪುರುಷೋತ್ತಮಃ ॥***

**ಭಾವಾರ್ಥ :–** ಕ್ಷರನಿಗಿಂತ ಅಧಿಕನಾಗಿರುವುದರಿಂದ, ಅಕ್ಷರನಿಗಿಂತ ಉತ್ತಮ ನಾಗಿರುವುದರಿಂದ, ನನ್ನನ್ನೇ ಲೋಕದಲ್ಲಿ ವೇದ ಸ್ವರೂಪವಾದ ಇಲ್ಲವೇ ಗುಣ ಸ್ವರೂಪವಾದ ಪ್ರಕೃತಿ ಪುರುಷೋತ್ತಮನನ್ನಾಗಿ ಹೇಳುತ್ತಿದೆ.

ಈ ಮೂರು ಶ್ಲೋಕಗಳಲ್ಲಿ ಕ್ಷರನು, ಅಕ್ಷರನು, ಪುರುಷೋತ್ತಮನೆಂದು ಮೂವರು ಪುರುಷರ ಬಗ್ಗೆ ಹೇಳುವುದು ನಡೆದಿದೆ. ಒಟ್ಟಾರೆ ವಿಶ್ವದಲ್ಲಿ ಈ ಮೂವರೇ ಪುರುಷರು ಇದ್ದಾರೆ. ಇವರ ವಿನಃ ಪುರುಷನೆಂಬುವವನು ಇಲ್ಲ. ಮೂವರು ಪುರುಷರಲ್ಲಿ ಕ್ಷರನು ಅಂದರೆ ನಾಶವಾಗುವವನೆಂದು ಅರ್ಥ. ಅಕ್ಷರನೆಂದರೆ ನಾಶ ಇಲ್ಲದವನೆಂದು ಅರ್ಥ. ಇನ್ನೂ ಇವರಿಬ್ಬರಿಗೂ ದೊಡ್ಡವನು ಮತ್ತು ಉತ್ತಮನಾದವನು ಪುರುಷೋತ್ತಮನನ್ನಾಗಿ ಹೇಳುತ್ತಾ, ಸಾವು ಹುಟ್ಟುಗಳು ಇಲ್ಲದವನಾಗಿ ಇದ್ದಾನೆ. ಪರಮಾತ್ಮ ಎನ್ನುವ ದೇವರು ವಿಶ್ವವೆಲ್ಲಾ ವ್ಯಾಪಿಸಿರುವುದೇ ಅಲ್ಲದೆ ಎಲ್ಲರ ಶರೀರಗಳಲ್ಲಿಯೂ ಇದ್ದಾನೆ. ಎಲ್ಲರಿಗೂ ದೇವರೆಂಬುವವನು ಒಬ್ಬನಿದ್ದಾನೆಂದು ತಿಳಿದಿದೆ. ಆದರೆ ಬಹಳ ಜನರಿಗೆ ತಾನು ಜೀವಿಯೆಂದು ತಿಳಿದಿಲ್ಲ. ಇನ್ನೂ ಮಧ್ಯದಲ್ಲಿರುವ ಅಕ್ಷರನೆ ಯಾರಿಗೂ ತಿಳಿದಿಲ್ಲ. ಅಕ್ಷರನೆನ್ನುವ ವನೇ ಮನುಷ್ಯ ಮಾಡುವ ಕರ್ಮಗಳನ್ನೆಲ್ಲಾ ಲೆಕ್ಕಿಸಿ ಲಿಖಿಸುವವನೆಂದು, ಅವುಗಳನ್ನು ಪುನಃ ಜಾರಿ ಮಾಡುವವನೆಂದು ಯಾರಿಗೂ ತಿಳಿದಿಲ್ಲ. ಪ್ರತಿ ಮನುಷ್ಯನ ಶರೀರದಲ್ಲಿ ಜೀವಿಯ ಜೊತೆ ಇದ್ದು, ಪ್ರತಿ ಚಲನೆಯನ್ನು ತಾನೇ ಮಾಡಿಸುತ್ತಾ ಶರೀರದೊಳಗಿನ ಅವಯವಗಳನ್ನು, ಹೊರಗಿನ ಅವಯವಗಳನ್ನೂ ನಡೆಸಿ ಜೀವಿಯ ಜೊತೆ ಕರ್ಮಗಳನ್ನು ಅನುಭವಿಸುವಂತೆ ಮಾಡುವವನು ಎರಡನೆಯವನಾದ ಅಕ್ಷರನೇ. ಈಗ ಅಕ್ಷರನು ಅನ್ನುವ ಶಬ್ಧ ತಿಳಿದುಹೋಗಿದೆ. ಆದ್ದರಿಂದ ಅಕ್ಷಕ್ಕೂ ಸಹ ಅರ್ಥವನ್ನು ಸುಲಭವಾಗಿ ಹೇಳಿಕೊಳ್ಳಬಹುದು.

ನಿನ್ನ ಶರೀರದಲ್ಲಿ ನೀನು ಶಿಕ್ಷೆಯನ್ನಾಗಲಿ, ಅಕ್ಷಯನ್ನಾಗಲಿ ಅನುಭವಿಸುವ ಜೀವಿಯು ಮಾತ್ರವೇ. ನಿನ್ನ ಶರೀರವನ್ನು ಕದಲಿಸಿ ರೂಪ, ಶಬ್ಧ, ಸ್ಪರ್ಶ, ರುಚಿ, ವಾಸನೆ ಎನ್ನುವ ಇಂದ್ರಿಯಜ್ಞಾನಗಳನ್ನು ಕೊಟ್ಟು, ನಿನ್ನಿಂದ ಕಷ್ಟಸುಖಗಳು ಅನುಭವಿಸುವಂತೆ ಮಾಡುವ ಅಕ್ಷರನು ನಿನ್ನ ಶರೀರದಲ್ಲಿ ನಿನ್ನ ಪಕ್ಕದಲ್ಲಿಯೇ ಇದ್ದರೂ ನಿನಗೆ ತಿಳಿಯುವುದಿಲ್ಲ. ಹಾಗೆ ಈ ಪ್ರಪಂಚದಲ್ಲಿ ಯಾರಿಗೂ ತಿಳಿದಿಲ್ಲ. ಪ್ರಸ್ತುತ ಕಾಲದಲ್ಲಿ ಎರಡನೇ ಪುರುಷನ ಗುರುತೇ ಇಲ್ಲ. ತಾನು ಜೀವಿಯೆಂಬ ವಿಷಯವನ್ನೇ ಭೂಮಿ ಮೇಲೆ ಶೇಕಡ 95 ರಷ್ಟು ಪ್ರಜೆಗಳು ಮರೆತುಹೋಗಿದ್ದಾರೆ. ಶೇಕಡ ಐದರಷ್ಟು ಜನರು ನಾಸ್ತಿಕರಾಗಿ ಬದಲಾಗಿ, ಆದಿ ಪುರುಷನಾದ ದೇವರನ್ನೇ ಇಲ್ಲ ಎನ್ನುತ್ತಿದ್ದಾರೆ. ಇತರ ಮತಗಳ ಹೆಸರು ಇಟ್ಟುಕೊಂಡವರಿಗೆ ಪುರುಷರ ಜ್ಞಾನವೇ ತಿಳಿದಿಲ್ಲ. ತನ್ನ ಶರೀರದಲ್ಲಿ ತನಗೂ, ತನ್ನ ಶರೀರಕ್ಕೂ ಅಧಿಪತಿಯಾದವನು ಒಬ್ಬನಿದ್ದಾನೆಂದು, ತನ್ನ ಶರೀರದ ಮೇಲೆ ತನಗೆ ಯಾವ ಅಧಿಕಾರ ಇಲ್ಲವೆಂದು, ತನ್ನ ಶರೀರವನ್ನು ತನ್ನಲ್ಲಿಯೇ ತನಗೆ ಪರವಾಗಿರುವ ಅಕ್ಷರನು ನಡೆಸುತ್ತಿದ್ದಾನೆಂದು, ತನಗೆ ಶರೀರದ ಮೇಲೆ ಯಾವ ಅಧಿಕಾರ ಇಲ್ಲವೆಂದು, ಆದ್ದರಿಂದಲೇ ತನಗೆ ಹೇಳದೆಯೇ ಶರೀರದೊಳಗೆ ರೋಗಗಳು ಬರುತ್ತಿವೆಯೆಂದು ಯಾರೂ ಗ್ರಹಿಸಲಾರದೆ ಹೋಗುತ್ತಿದ್ದಾರೆ. ಯಾರೂ ಗುರುತಿಸದಂತೆ ಶರೀರದಲ್ಲಿ ಅಕ್ಷರನೆಂಬುವ ಎರಡನೆಯವನಿದ್ದಾನೆ.

ಶರೀರದಲ್ಲಿ ರಹಸ್ಯವಾಗಿ ಯಾರೂ ಗುರುತಿಸದಂತಿರುವ ಅಕ್ಷರನನ್ನು ಗುಪ್ತನು ಅಂದಿದ್ದಾರೆ. ಗುಪ್ತನು ಅಂದರೆ ತಿಳಿಯದಂತೆ ಅಡಗಿರುವವನೆಂದು ಅರ್ಥ. ಶರೀರದಲ್ಲಿ ಪ್ರತ್ಯಕ್ಷವಾಗಿ ಕೆಲಸಗಳು ಮಾಡುತ್ತಿದ್ದರೂ, ಪ್ರತಿ ಚಲನೆಗೂ ಕಾರಣವಾಗಿದ್ದರೂ, ಮಾಯೆ ಎನ್ನುವ ಮುಸುಗನ್ನು ಹೊದ್ದಿಸಿ ಪ್ರತ್ಯಕ್ಷವಾಗಿ ಪಕ್ಕದಲ್ಲೇ ಇದ್ದರೂ ತಿಳಿಯದಂತಿರುವುದು ಬಹಳ ವಿಚಿತ್ರ. ಆಲೋಚಿಸಿದರೆ ಚಿತ್ರವಾಗಿ ತಿಳಿಯುವವನು ಅಕ್ಷರನು. ಆದ್ದರಿಂದ ಎರಡನೆಯವನನ್ನು ಚಿತ್ರಗುಪ್ತನು ಅಂದಿದ್ದಾರೆ. ನಮ್ಮ ಶರೀರದಲ್ಲಿ ವಿಚಿತ್ರವಾಗಿ, ರಹಸ್ಯವಾಗಿದ್ದಾನೆ ಆದ್ದರಿಂದ

ಚಿತ್ರಗುಪ್ತನು ಅನ್ನಬೇಕಾಗಿ ಬಂದಿದೆ. ಕ್ಷರನು ಮೂರನೆಯವನಾದ ಜೀವಾತ್ಮನಾಗಿದ್ದು, ಅಕ್ಷರನು ಎರಡನೆಯವನಾದ ಆತ್ಮ ಇಲ್ಲವೆ ಚಿತ್ರಗುಪ್ತನು. ಆದಿ ಪುರುಷನಾದ ಪರಮಾತ್ಮ ಮೂಲ ಪುರುಷನಾದ ದೇವರು. ದೇವರು ಕೆಲಸ ಮಾಡದವನು ಆದ್ದರಿಂದ ಕ್ರಿಯಾರಹಿತನೆಂದು ಆತನನ್ನು ಅನ್ನುತ್ತಿದ್ದೇವೆ. ಇನ್ನೂ ಜೀವಿಯು ಶರೀರದೊಳಗೆ ಚಿಕ್ಕ ಕೇಂದ್ರದಲ್ಲಿದ್ದು, ಏನು ಮಾಡಲಾರದೆ ತನ್ನವರೆಗೂ ಬಂದಿರುವವುಗಳನ್ನು ಮಾತ್ರವೇ ಅನುಭವಿಸುತ್ತಿದ್ದಾನೆ. ಶರೀರದೊಳಗಿರುವ ಜೀವಿಯು ಸಹ ಕ್ರಿಯೆಗಳನ್ನು ಆಚರಿಸುವವನು ಅಲ್ಲ. ಆದರೆ ಈ ಮಾತು ಬಹಳ ಜನರಿಗೆ ಅಸತ್ಯವಾಗಿ, ಆಶ್ಚರ್ಯವಾಗಿ ಕಾಣಿಸಿದರೂ, ಜೀವಿಯು ಅನುಭವಿಸುವ ಕೆಲಸ ಹೊರತು ಯಾವ ಕೆಲಸವನ್ನು ಮಾಡುವುದಿಲ್ಲ ಎಂಬುದು ಸಂಪೂರ್ಣವಾದ ಸತ್ಯ. ಪೂರ್ತಿ ಆಶ್ಚರ್ಯಕರವಾದ ವಿಷಯವೇನೆಂದರೆ ಈ ಸುವಿಶಾಲ ವಿಶ್ವದಲ್ಲಿ ಸರ್ವಜೀವಿಗಳ ಶರೀರಗಳನ್ನು ಆಡಿಸಿ ನಡೆಸುವವನು ಒಂದೇ ಒಂದು ಆತ್ಮ. ಅದೇ ಅಕ್ಷರಾತ್ಮವಾಗಿ ಚಿತ್ರಗುಪ್ತನಾಗಿ ಯಾರಿಗೂ ತಿಳಿಯದಂತೆ ಇದೆ.

ಒಂದು ಶರೀರದಲ್ಲಿರುವ ಆತ್ಮ ಮತ್ತೊಂದು ಶರೀರವನ್ನು ಹತ್ಯೆ ಮಾಡುತ್ತಿದೆ. ಒಂದು ಶರೀರವನ್ನು ಬಲವಂತನನ್ನಾಗಿ ಮಾಡಿ ಶಕ್ತಿಯನ್ನು ಕೊಟ್ಟು ಹೊಡೆಯುತ್ತಿದೆ. ಮತ್ತೊಂದು ಶರೀರವನ್ನು ಬಲಹೀನನನ್ನಾಗಿ ಮಾಡಿ ಹೊಡೆತಗಳು ತಿನ್ನುವಂತೆ ಮಾಡುತ್ತಿದೆ. ಈ ವಿಧವಾಗಿ ಎಲ್ಲರ ಶರೀರದಲ್ಲಿರುವ ಆತ್ಮ, ಒಬ್ಬೊಬ್ಬರನ್ನು ಒಂದೊಂದು ವಿಧವಾಗಿ ನಡೆಸುತ್ತಾ ಚಿತ್ರ ವಿಚಿತ್ರಗಳು ಮಾಡುತ್ತಿದೆ. ಆದರೆ ಈ ಆತ್ಮ ವಿಷಯ ತಿಳಿಯದವರು ಎಲ್ಲರೂ ತಾವೇ ಎಲ್ಲಾ ಕೆಲಸಗಳು ಮಾಡುತ್ತಿರುವಂತೆ ಭ್ರಮಿಸುತ್ತಿದ್ದಾರೆ. ಅದೇ ದೊಡ್ಡ ಅಜ್ಞಾನವಾಗಿ, ತಮ್ಮ ಭಾವಗಳಿಂದಲೇ ಪಾಪಪುಣ್ಯಗಳು ಏರ್ಪಡುತ್ತಿವೆ ಎಂದು ತಿಳಿಯಲಾರದೆ ಹೋಗುತ್ತಿದ್ದಾರೆ. ಆದ್ದರಿಂದಲೇ ಹತ್ಯೆ ಮಾಡಿರುವುದು ಆತ್ಮ ಆದರೆ, ಹತ್ಯಾ ಪಾಪವನ್ನು ಅನುಭವಿಸುವುದು ಜೀವಾತ್ಮವಾಗಿ ಇದೆ. ಹಾಗೆಯೇ ಕೆಲವು ಒಳ್ಳೆಯ ಕೆಲಸಗಳನ್ನು ಮಾಡಿರುವುದು ಆತ್ಮವೇ ಆದರೂ ಜೀವಾತ್ಮ

ತಾನೇ ಮಾಡಿದ್ದೇನೆಂದು ಅಂದುಕೊಳ್ಳುವುದರಿಂದ ಅದಕ್ಕೆ ಪ್ರತಿಫಲಿತವಾಗಿ ಪುಣ್ಯ ಬರುತ್ತಿದೆ. ಜೀವಿಯು ತಾನು ಮಾಡದ ಕೆಲಸಗಳನ್ನು ಅಜ್ಞಾನದಿಂದ ಅಹಮ್‌ನಿಂದ ನಾನೇ ಮಾಡಿದ್ದೇನೆಂದು ಅಂದುಕೊಳ್ಳುವುದರಿಂದ ಬಂದಿರುವ ಪಾಪಗಳನ್ನು ಶಿಕ್ಷೆಯಾಗಿ, ಹಾಗೆಯೇ ಬಂದಿರುವ ಪುಣ್ಯವನ್ನು ಅಕ್ಷಯಾಗಿ ಅನುಭವಿಸುತ್ತಿದ್ದಾನೆ. ತನ್ನ ಪಾಲಿಗೆ ಬಂದಿರುವ ಪಾಪವಾಗಲಿ, ಪುಣ್ಯವಾಗಲಿ ಅನುಭವಿಸದಂತೆ ತಪ್ಪಿಸಿಕೊಳ್ಳಬೇಕೆಂದು ಎಷ್ಟು ಜನ ಎಷ್ಟು ಪ್ರಯತ್ನಗಳು ಮಾಡಿದರೂ, ಎಷ್ಟೋಜನ ದೇವತೆಗಳಿಗೆ ಮುಗಿದರೂ, ನಿನ್ನ ಪಕ್ಕದಲ್ಲಿಯೇ ನಿನ್ನ ಶರೀರದಲ್ಲಿರುವ ಆತ್ಮನಾದ ಚಿತ್ರಗುಪ್ತನು ಯಾವ ಕಾರಣಕ್ಕೂ ಬಿಡದಂತೆ ಅನುಭವಿಸುವಂತೆ ಮಾಡುತ್ತಾನೆ. ಯಾರು ಯಾವ ವಿಧವಾಗಿ ಶಿಕ್ಷೆಯನ್ನು ಅನುಭವಿಸುವುದು ಅನುಭವಿಸುವವರೆಗೂ ಯಾರಿಗೂ ತಿಳಿಯುವುದಿಲ್ಲ. ಹಾಗೆಯೇ ಯಾರು ಯಾವ ವಿಧವಾಗಿ ಎಷ್ಟು ಅಕ್ಷವನ್ನು ಅನುಭವಿಸುವುದು ಅನುಭವಿಸುವವರೆಗೂ ಯಾರಿಗೂ ತಿಳಿಯುವುದಿಲ್ಲ.

ಒಂದು ಕಾರ್ಯ ನಡೆಯುವುದಕ್ಕೆ ಕರ್ಮ ಕಾರಣವಾಗಿರುತ್ತದೆ. ಕಾರ್ಯ ನಡೆದರೆ ಕಾರಣವಾದ ಕರ್ಮ (ಪಾಪವಾಗಲಿ ಅಥವಾ ಪುಣ್ಯವಾಗಲಿ) ತೀರಿಹೋಗುತ್ತದೆ. ಕಾರ್ಯ ನಡೆದಾಗ ಆ ಕಾರ್ಯದಲ್ಲಿನ ಪಾಪಪುಣ್ಯಗಳು ಹೊಸದಾಗಿ ಬಂದರೂ, ಅವು ಆತ್ಮವನ್ನು ಅಂಟುವುದಿಲ್ಲ. ಕಾರ್ಯ ಮಾಡಿರು ವುದು ಚಿತ್ರಗುಪ್ತನಾದ ಆತ್ಮೇ ಆದ್ದರಿಂದ ಆ ಕಾರ್ಯದಲ್ಲಿ ಬರುವ ಫಲಿತವಾದ ಕರ್ಮ ಆತ್ಮವನ್ನು ಸೇರಬೇಕಾಗಿದ್ದರೂ, ಅದು ಆತ್ಮವನ್ನು ಸೇರಲಿಲ್ಲ. ಅಗ್ನಿಯೊಳಗೆ ಬಂದು ಬೀಳುವ ಯಾವ ಮಿಡತೆಯಾಗಲಿ, ಯಾವ ಹುಳವಾಗಲಿ, ಯಾವ ಕಟ್ಟಿಗೆಯೇಯಾಗಲಿ ಸುಟ್ಟುಹೋಗದೆ ತಪ್ಪುವುದಿಲ್ಲ. ಅದೇ ವಿಧವಾಗಿ ಎರಡನೇ ಪುರುಷನಾದ ಆತ್ಮ ಶರೀರಕ್ಕೆ ಅಧಿಪತಿಯಾಗಿ, ಶರೀರವೆಲ್ಲಾ ವ್ಯಾಪಿಸಿದ್ದು, ಶರೀರದಿಂದ ಮಾಡಿಸಿದ ಕೆಲಸದಲ್ಲಿ ತಯಾರಾಗಿ ಬಂದಿರುವ ಯಾವ ಪಾಪವಾಗಲಿ, ಯಾವ ಪುಣ್ಯವಾಗಲಿ, ಎಷ್ಟು ದೊಡ್ಡ ಕರ್ಮವಾಗಲಿ ಆತ್ಮವನ್ನು ಅಂಟುವುದಿಲ್ಲ. ಮೂರನೆಯವನಾದ ಜೀವಾತ್ಮ ಶರೀರದಲ್ಲಿ ಒಳಗೆ ಒಂದು

ಕಡೆ ಇದ್ದರೂ, ಅದು ಯಾವ ಕೆಲಸ ಮಾಡಲಿಲ್ಲ, ಆದ್ದರಿಂದ ಜೀವಿಯನ್ನು ಸಹ ಕರ್ಮ ಅಂಟುವುದಕ್ಕೆ ಸಾಧ್ಯವಿಲ್ಲ. ಆದರೆ ಜೀವಿಯು ತಾನು ಮಾಡದ ಕೆಲಸವನ್ನು ತಾನು ಮಾಡಿದಂತೆ ಅಂದುಕೊಳ್ಳುವುದರಿಂದ ಕಾರ್ಯದಲ್ಲಿ ತಯಾರಾದ ಕರ್ಮ ಬಂದು ಜೀವಿಯನ್ನು ಸೇರುತ್ತಿದೆ. ಈ ವಿಧವಾಗಿ ಪ್ರಪಂಚದಲ್ಲಿ ಶರೀರವನ್ನು ಧರಿಸಿ ಹುಟ್ಟಿದ ಜೀವಿಯು ತಾನು ಮಾಡದ ಕಾರ್ಯಕ್ಕೆ ಕರ್ಮಬದ್ಧನಾಗುತ್ತಿದ್ದಾನೆ.

ಜೀವಿಯನ್ನು ಅಂಟಿಕೊಂಡಿರುವ ಕರ್ಮವನ್ನು ಎರಡನೆಯವನು ಮತ್ತು ಶರೀರದಲ್ಲಿ ಜೀವಿಗೆ ಪಕ್ಕದವನಾದ ಆತ್ಮ, ಜೀವಿಯ ಕರ್ಮಕ್ಕೆ ತಕ್ಕಂತೆ ಕಾರ್ಯಗಳನ್ನು ಮಾಡಿ, ಆ ಕಾರ್ಯಗಳಲ್ಲಿನ ಕಷ್ಟ ಸುಖಗಳನ್ನು ಜೀವಿಯಿಂದ ಅನುಭವಿಸುವಂತೆ ಮಾಡುತ್ತಿದೆ. ತನಗೆ ಸಂಬಂಧ ಇಲ್ಲದಿದ್ದರೂ, ತಾನು ಮಾಡದಿದ್ದರೂ ಜೀವಾತ್ಮ ಅನವಶ್ಯಕವಾಗಿ ಕರ್ಮವನ್ನು ತನ್ನ ತಲೆಯ ಮೇಲೆ ಹಾಕಿಕೊಂಡು ಪುನಃ ಹುಟ್ಟಿ ಅನುಭವಿಸುತ್ತಿದೆ. ಜೀವಿಯು ಶರೀರದಲ್ಲಿನ **"ಅಹಮ್"** ಎನ್ನುವ ಭಾಗವೊಂದರ ಮಾತು ಕೇಳಿ, ತಾನು ಅಹಂಭಾವವನ್ನು ಹೊಂದಿ ಮಾಡದ ಕಾರ್ಯಗಳಿಗೆ ಕರ್ಮವನ್ನು ಮೂಟೆ ಕಟ್ಟಿಕೊಳ್ಳುವುದರಿಂದ, ಜೀವಿಯೇ ಕರ್ಮವನ್ನು ಅನುಭವಿಸಬೇಕಾಗಿ ಬಂದಿದೆ. ಅನುಭವಿಸುವವನು ಜೀವಿಯಾದರೆ, ಅನುಭವಿಸುವಂತೆ ಮಾಡುವವನು ಚಿತ್ರಗುಪ್ತ ಬಿರುದಾಂಕಿತನಾದ ಆತ್ಮವೆಂದು ತಿಳಿದುಹೋಗಿದೆ. ಮನುಷ್ಯನನ್ನು ನಡೆಸಿ ಆಡಿಸಿ ಜೀವಿಯನ್ನು ಅನುಭವಿಸುವಂತೆ ಮಾಡುವವನು ಆತ್ಮವಾದರೆ, ಶರೀರದೊಳಗೂ ಸಹ ದೇವರು ಸಾಕ್ಷಿಯಾಗಿ ಇದ್ದಾನೆ. ನಡೆಸಲ್ಪಡುವವನು ಆಥವಾ ಆಡಿಸಲ್ಪಡುವವನು ಇಲ್ಲವೆ ಓಡಿಸಲ್ಪಡುವವನು ಜೀವಾತ್ಮನಾದರೆ ನಡೆಸುವವನು, ಆಡಿಸುವವನು, ಓಡಿಸುವವನು ಎರಡನೆಯವನಾದ ಆತ್ಮವಾಗಿರುವಾಗ ಪರಮಾತ್ಮ ಸಾಕ್ಷಿಯಾಗಿದ್ದಾನೆ. ಇದನ್ನೇ ಅಥವಾ ಈ ವಿಷಯವನ್ನೇ **"ತ್ರೈತಸಿದ್ಧಾಂತ"** ಅನ್ನುತ್ತಿದ್ದೇವೆ. ಮೂರು ಆತ್ಮಗಳ ಈ ತ್ರೈತ ಸಿದ್ಧಾಂತ ಭಗವದ್ಗೀತೆಯಲ್ಲಿಯೂ, ಬೈಬಲ್‌ನಲ್ಲಿಯೂ, ಖುರ್‌ಆನ್ ಗ್ರಂಥದಲ್ಲಿಯೂ ತಿಳಿಸಲಾಗಿದೆ, ಆದರೂ

ಮತಗಳ ಮತ್ತಿನಲ್ಲಿರುವವರಿಗೆ ಈ ಮೂರು ಆತ್ಮಗಳ ವಿಷಯ ಸ್ವಲ್ಪವೂ ತಿಳಿಯದಂತೆ ಹೋಗಿದೆ. ಆದ್ದರಿಂದ ಪುನಃ ನಾವು ಈಗ ಜ್ಞಾಪಕ ಮಾಡಬೇಕಾಗಿ ಬಂದಿದೆ. ಉದಾಹರಣೆಗೆ ಖುರ್‌ಆನ್ ಗ್ರಂಥದಲ್ಲಿ ಮೂರು ಆತ್ಮಗಳ ವಿಷಯ 'ಖಾಫ್' ಎನ್ನುವ 50ನೇ ಸುರಾದಲ್ಲಿ 21ನೇ ಆಯತ್‌ನಲ್ಲಿ ಹೀಗೆ ಇದೆ.

1. "ದಿವ್ಯ ಖುರ್‌ಆನ್" ಗ್ರಂಥದಲ್ಲಿ 50–21 :– "ಪ್ರತಿ ವ್ಯಕ್ತಿ ತನ್ನಹಿಂದೆ ಒಬ್ಬ ನಡೆಸುವವನೂ, ಒಬ್ಬ ಸಾಕ್ಷಿಯನ್ನು ಹೇಳುವವನೂ ಇರುವ ಸ್ಥಿತಿಯಲ್ಲಿ ಬರುತ್ತಾನೆ." ಎಂದು ಬರೆಯಲ್ಪಟ್ಟಿದೆ.

2. "ಅಂತಿಮ ದೈವ ಗ್ರಂಥ ಖುರ್‌ಆನ್" ಎನ್ನುವುದರಲ್ಲಿ 50–21 :– "ಪ್ರತಿ ವ್ಯಕ್ತಿ ತನ್ನಹಿಂದೆ ತನ್ನನ್ನು ತೆಗೆದುಕೊಂಡು ಬರುವವನೊಬ್ಬನು, ಸಾಕ್ಷಿಕೊಡುವವನೊಬ್ಬನು ಇರುವ ಸ್ಥಿತಿಯಲ್ಲಿ ಹಾಜರಾಗುತ್ತಾನೆ." ಎಂದು ಬರೆಯಲ್ಪಟ್ಟಿದೆ.

3. "ದಿವ್ಯ ಖುರ್‌ಆನ್ ಸಂದೇಶ" ಎನ್ನುವ ಗ್ರಂಥದಲ್ಲಿ 50–21 :– "ಪ್ರತಿ ಆತ್ಮ (ಪ್ರಾಣಿ) ಒಬ್ಬ ನಡೆಸುವವನ ಜೊತೆ, ಮತ್ತೊಬ್ಬನು ಸಾಕ್ಷಿಕೊಡುವವನ ಜೊತೆ ಸಹ ಬರುತ್ತದೆ." ಎಂದು ಬರೆಯಲಾಗಿದೆ.

4. "ಖುರಾನ್ ಮಜೀದ್" ಎನ್ನುವ ಗ್ರಂಥದಲ್ಲಿ 50–21 :– "ಪ್ರತಿ ಮಾನವನೂ ಬರುತ್ತಾನೆ. ಆತನ ಜೊತೆ ಒಬ್ಬನನ್ನು ತೆಗೆದುಕೊಂಡು ಬರುವವನೂ, ಮತ್ತೊಬ್ಬನು ಸಾಕ್ಷಿಯಾಗಿರುತ್ತಾರೆ." ಎಂದು ಬರೆಯಲ್ಪಟ್ಟಿದೆ.

ಶ್ರೀ ಕೃಷ್ಣನು ಹೇಳಿದ ಭಗವದ್ಗೀತೆ ಹೇಗೆ ಸಂಸ್ಕೃತ ಭಾಷೆಯಲ್ಲಿ ಶ್ಲೋಕಗಳ ರೂಪವಾಗಿ ಬರೆಯಲಾಗಿದೆಯೋ, ಹಾಗೆಯೇ ಜಿಬ್ರಯೇಲ್ ಹೇಳಿದ ಖುರ್‌ಆನ್ ಗ್ರಂಥ ಅರಬ್ಬೀ ಭಾಷೆಯಲ್ಲಿ ವಾಕ್ಯಗಳ ರೂಪವಾಗಿ ಬರೆಯಲಾಗಿದೆ. ಅರಬ್ಬೀ ವಾಕ್ಯಗಳನ್ನು ಕನ್ನಡದೊಳಗೆ ಅನುವಾದಿಸಿದವರು ಕೆಲವು ಪದಗಳ ಬದಲಾವಣೆಯಿಂದ ಬರೆದರೂ, ಭಾವ ಮಾತ್ರ ಒಂದಾಗಿಯೇ ಇರುವಂತೆ

ತಿಳಿಯುತ್ತಿದೆ. ಭಗವದ್ಗೀತೆ ಮೂಲ ಗ್ರಂಥ ಸಂಸ್ಕೃತ ಭಾಷೆಯಲ್ಲಿ ಇರುವುದರಿಂದ ಗೀತೆಯಲ್ಲಿನ ಸಂಸ್ಕೃತ ಶ್ಲೋಕವನ್ನು ಹೇಳಿ, ಅದರ ವಿವರವನ್ನು ಕನ್ನಡದಲ್ಲಿ ಹೇಳಿದಂತೆ, ಖುರ್‌ಆನ್ ಗ್ರಂಥದಲ್ಲಿಯೂ ಸಹ ಮೊದಲು ಅರಬ್ಬೀ ಭಾಷೆಯಲ್ಲಿನ ವಾಕ್ಯವನ್ನು (ಆಯತ್‌ನ್ನು) ಹೇಳಿ ಅದರ ವಿವರವು ಹೇಳಬೇಕಾಗಿರುತ್ತದೆ. ಇಲ್ಲಿ ನಮಗೆ ಬೇಕಾಗಿರುವುದು ದೈವಜ್ಞಾನ, ಆದ್ದರಿಂದ ಭಾಷೆಗಿಂತ ಭಾವ ಮುಖ್ಯ. ಅರಬ್ಬೀ ಭಾಷೆಯನ್ನು ತಿಳಿದವರು ಕೆಲವರು ಖುರಾನ್ ಜ್ಞಾನಿಗಳು ಕನ್ನಡದಲ್ಲಿ ಭಾವವನ್ನು ಬರೆಯುವುದು ನಡೆದಿದೆ. ನಾಲ್ಕು ಜನ ಮುಸ್ಲೀಮ್ ಪಂಡಿತರು ಬರೆದ ನಾಲ್ಕು ಖುರ್‌ಆನ್ ಗ್ರಂಥಗಳನ್ನು ನೋಡಿದ್ದೇವೆ. ಎಲ್ಲರ ಭಾವ ಒಂದಾಗಿಯೇ ಇರುವುದರಿಂದ, ಖುರ್‌ಆನ್ ವಾಕ್ಯದ ನಿಜ ಭಾವವು ನಮಗೆ ತಿಳಿದಂತೆ ಆಗಿದೆ. ಖುರ್‌ಆನ್‌ನಲ್ಲಿ ಅರಬ್ಬೀ ಭಾಷೆಯಲ್ಲಿ 50–21 ಹೀಗೆ ಇದೆ. "ವ–ಜಾಅತ್–ಕುಲ್ಲು–ನಫ್‌ಸಿಮ್–ಮಅಹಾ–ಸಾ ಇಖುನ್ ವ–ಷಹೀದ್."

ಖುರ್‌ಆನ್ ಗ್ರಂಥದಲ್ಲಿ ಹೇಳಿದಂತೆ ಸಾಕ್ಷಿಯಾಗಿರುವವನು ದೇವ ರಾದರೆ, ನಿನ್ನನ್ನು ನಡೆಸುವವನು ಅಥವಾ ತನ್ನನ್ನು ತೆಗೆದುಕೊಂಡು ಬರುವವನು ಎಂದು ಹೇಳಲ್ಪಟ್ಟವನು ಚಿತ್ರಗುಪ್ತವಾದ ಆತ್ಮವಾಗಿ ಇದೆ. ನಿನ್ನನ್ನು ನಡೆಸುವವನು ಆತ್ಮವಾದರೆ ನೀನು ಜೀವಾತ್ಮನಾಗಿದ್ದೀಯಾ. ಜೀವಾತ್ಮ ಎನ್ನುವವನು ತಾನು ಸ್ವತಃ ಏನು ಮಾಡಲಾರನು. ತೆಗೆದುಕೊಂಡು ಬರುವವನಾಗಿ, ನಡೆಸಲ್ಪಡುವ ವನಾಗಿದ್ದಾನೆ. ಇದರಿಂದ ಕೆಲಸ ಮಾಡುವವನು ಆತ್ಮವೆಂದು, ಸಾಕ್ಷಿಯಾಗಿ ನೋಡುವವನು ದೇವರೆಂದು, ಅನುಭವಿಸುವವನು ಜೀವಾತ್ಮನೆಂದು ತಿಳಿದುಹೋ ಗಿದೆ. ಶರೀರದಲ್ಲಿ ಜೀವಿಯು ವಿಷಯ ಸುಖಗಳನ್ನು ಅನುಭವಿಸುತ್ತಿದ್ದಾನೆಂದು, ಆತ್ಮ ಶರೀರ ಭಾಗಗಳಿಗೆ ಶಕ್ತಿಯನ್ನು ಕೊಟ್ಟು ನಡೆಸುತ್ತಾ ಜೀವಿಯನ್ನು ಅನುಭವಿಸುವಂತೆ ಮಾಡುತ್ತಿದೆ ಎಂದು, ಜ್ಞಾನದೃಷ್ಟಿ ಇರುವವರಿಗೆ ಮಾತ್ರವೇ ತಿಳಿಯುತ್ತದೆ ಎಂದು ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 9, 10 ಶ್ಲೋಕಗಳಲ್ಲಿ ಈ ವಿಧವಾಗಿ ಭಗವಂತನು ಹೇಳುತ್ತಿದ್ದಾನೆ ನೋಡಿರಿ.

***ಶ್ಲೋ ॥ 9 :*** ***ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣ ಮೇವಚ***
***ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥***

**ಭಾವಾರ್ಥ :–** ಶಬ್ದವನ್ನು ತಿಳಿಸುವ ಕಿವಿಯನ್ನು, ದೃಷ್ಟಿಯನ್ನು ತಿಳಿಸುವ ಕಣ್ಣನ್ನು, ಸ್ಪರ್ಶವನ್ನು ತಿಳಿಸುವ ಚರ್ಮವನ್ನು, ರುಚಿಯನ್ನು ತಿಳಿಸುವ ನಾಲಿಗೆಯನ್ನು, ವಾಸನೆಯನ್ನು ತಿಳಿಸುವ ಮೂಗನ್ನು ಮತ್ತು ಮನಸ್ಸನ್ನು ಜೀವಾತ್ಮ ಅಧಿಷ್ಠಿಸಿದ್ದು ಯಾವಾಗಲೂ ವಿಷಯ ಅನುಭವಗಳೆಂಬ ಸುಖದುಃಖ ಗಳನ್ನು ಅನುಭವಿಸುತ್ತಿದ್ದಾನೆ.

***ಶ್ಲೋ ॥ 10 :*** ***ಉತ್ಕ್ರಾಮನ್ತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಮ್***
***ವಿಮೂಢಾ ನಾನುಪಶ್ಯನ್ತಿ ಪಶ್ಯನ್ತಿ ಜ್ಞಾನಚಕ್ಷುಷಃ ॥***

**ಭಾವಾರ್ಥ :–** ಜೀವಾತ್ಮ ಶರೀರವನ್ನು ಧರಿಸಿ, ಒಳಗೆ ಗುಣಗಳಿಂದ ಕೂಡಿ ಕೊಂಡಿದ್ದು ಹೊರಗಿನಿಂದ ಬರುವ ವಿಷಯ ಸುಖಗಳನ್ನು ಅಥವಾ ವಿಷಯ ದುಃಖಗಳನ್ನು ಅನುಭವಿಸುತ್ತಿರುತ್ತಾನೆ. ಆತ್ಮಗಳ ಜ್ಞಾನವಿಲ್ಲದ ಮೂಢರಿಗೆ ಈ ವಿಧಾನ ಕಾಣಿಸುವುದಿಲ್ಲ. ಜ್ಞಾನನೇತ್ರ ಹೊಂದಿದವರಿಗೆ ಮಾತ್ರ ಶರೀರದಲ್ಲಿ ಜೀವಿಯು ಇರುವ ಸ್ಥಿತಿ ತಿಳಿಯುತ್ತಿದೆ.

ಇಲ್ಲಿ ವಿಶೇಷ ಏನೆಂದರೆ ಶರೀರದಲ್ಲಿರುವ ಕಣ್ಣು, ಮೂಗು, ಕಿವಿ, ಚರ್ಮ, ನಾಲಿಗೆಗೆ ಶಕ್ತಿಯನ್ನು ಕೊಟ್ಟು ನಡೆಸುವವನು ಗುಪ್ತವಾಗಿ ಶರೀರವೆಲ್ಲಾ ವ್ಯಾಪಿಸಿರುವ ಆತ್ಮ. ಗುಪ್ತವಾದವನು ಶರೀರ ಅವಯವಗಳನ್ನು ನಡೆಸುತ್ತಾ ಅವುಗಳ ಮೂಲಕ ಒಳಗಿರುವ ಜೀವಿಯನ್ನು ಕಷ್ಟಸುಖಗಳನ್ನು ಅನುಭವಿಸುವಂತೆ ಮಾಡುತ್ತಿದ್ದಾನೆ. ಆತ್ಮ ನಡೆಸುವ ಇಂದ್ರಿಯಗಳ ಮೂಲಕ ಜೀವಿಯು ಅನುಭವಗಳನ್ನು ಹೊಂದುತ್ತಿದ್ದಾನೆಂಬುವ ವಿಷಯ ಜ್ಞಾನದೃಷ್ಟಿ ಇರುವವರಿಗೆ ಮಾತ್ರವೇ ತಿಳಿಯುತ್ತದೆ, ಜ್ಞಾನದೃಷ್ಟಿ ಇಲ್ಲದವರಿಗೆ ಸ್ವಲ್ಪವೂ ತಿಳಿಯುವುದಿಲ್ಲವೆಂದು ಸ್ಪಷ್ಟವಾಗಿ ಗೀತೆಯಲ್ಲಿ ಹೇಳಲಾಗಿದೆ. ಅಷ್ಟೇ ಅಲ್ಲದೆ ಎಲ್ಲರನ್ನು ಆಡಿಸುವ ಆತ್ಮ ಶರೀರದಲ್ಲಿರುವ ವಿಷಯವು ಪ್ರಯತ್ನ ಮಾಡುವ ಯೋಗಿಗಳಿಗೆ ಮಾತ್ರವೇ

ತಿಳಿಯುತ್ತದೆ ಎಂದು, ಯೋಗಿಗಳಲ್ಲದವರಿಗೆ, ಪ್ರಕೃತಿ ದೃಷ್ಟಿ ಹೊಂದಿದವರಿಗೆ ಆತ್ಮ ತಿಳಿಯುವುದಿಲ್ಲವೆಂದು, ಅದೇ ಅಧ್ಯಾಯದಲ್ಲಿ 11ನೇ ಶ್ಲೋಕದಲ್ಲಿ ಇದೆ ನೋಡಿ.

**11ನೇ ಶ್ಲೋ॥ ಯತನ್ತೋ ಯೋಗಿನ ಶ್ಚೈನಂ ಪಶ್ಯನ್ತ್ಯಾತ್ಮ ನ್ಯವಸ್ಥಿತಮ್।**
**ಯತಂತೋಽಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯ ಚೇತಸಃ ॥**

**ಭಾವಾರ್ಥ :–** ಪ್ರಯತ್ನ ಮಾಡುವ ಯೋಗಿಗಳು ಮಾತ್ರ ಆತ್ಮ ಶರೀರವೆಲ್ಲಾ ಯಾವ ವಿಧವಾಗಿ ಆವರಿಸಿರುವುದು ತಿಳಿಯುತ್ತಾರೆ. ಪ್ರಕೃತಿ ಜ್ಞಾನವನ್ನು ತಿಳಿದವರಿಗೆ ಸ್ಥೂಲವು ಬಿಟ್ಟರೆ ಸೂಕ್ಷ್ಮವಾದ ಆತ್ಮ ತಿಳಿಯುವುದಿಲ್ಲ.

ವಸ್ತ್ರವನ್ನು ಧರಿಸಿದ ಮನುಷ್ಯ ವಸ್ತ್ರವು ನಾನು ಅಲ್ಲ, ನಾನು ವಸ್ತ್ರದೊಳಗೆ ಇದ್ದೇನೆಂದು ಜ್ಞಾಪಕ ಹೊಂದಿರುತ್ತಾನೆ. ಧರಿಸಿದ ವಸ್ತ್ರವನ್ನು ಸಹ ನಾನೇ ಎಂದು ತಿಳುವಳಿಕೆ ಇಲ್ಲದವನೂ ಸಹ ಅಂದುಕೊಳ್ಳುವುದಿಲ್ಲ. ಆದರೇ ಜೀವಿಯು ಶರೀರವನ್ನು ವಸ್ತ್ರದಂತೆ ಧರಿಸಿದ್ದು, ಶರೀರ ಬೇರೆ ನಾನು ಬೇರೆ ಎಂಬ ಜ್ಞಾಪಕ ಇಲ್ಲದೆ, ಶರೀರವನ್ನು ನೋಡಿಕೊಂಡು ಶರೀರವನ್ನು ನಾನೇ ಅಂದುಕೊಳ್ಳುತ್ತಿದ್ದಾನೆ. ಶರೀರವನ್ನೇ ತಾನಾಗಿ ಅಂದುಕೊಂಡವನು ಶರೀರದ ಮೂಲಕ ನಡೆಯುವ ಕೆಲಸಗಳೆಲ್ಲಾ ತಾನೇ ಮಾಡುತ್ತಿದ್ದೇನೆಂದುಕೊಳ್ಳುವುದು ನಡೆಯುತ್ತಿದೆ. ಜೀವಿಯು ಯಾವ ವಿಧವಾಗಿ ಅಂದುಕೊಂಡರೂ, ಶರೀರದ ಮೂಲಕ ನಡೆಯುವ ಕೆಲಸಗಳಿಂದಲೇ ಜೀವಿಯು ದುಃಖಗಳನ್ನು ಹೊಂದುತ್ತಿದ್ದಾನೆ. ಶರೀರದಲ್ಲಿನ ಬುದ್ಧಿ ತಾನು ಅಲ್ಲದಿದ್ದರೂ ತನ್ನನ್ನು ದೊಡ್ಡ ಪ್ರತಿಭಾವಂತನನ್ನಾಗಿ ಹೇಳಿಕೊಳ್ಳುತ್ತಿರುತ್ತಾನೆ. ಆದರೂ ತನ್ನ ಬುದ್ಧಿಯಿಂದಲೇ ಕಷ್ಟಗಳು ಸಹ ಏಕೆ ಬರುತ್ತಿವೆ ಎಂದು ತಿಳಿಯಲಾರದೆ ಹೋಗುತ್ತಿದ್ದಾನೆ. ಶರೀರದಲ್ಲಿ ವಾಸಿಸುವ ಜೀವಿಗೆ ತಿಳಿಯದಂತೆಯೇ ಶರೀರದಲ್ಲಿನ ಆತ್ಮವೇ ಜೀವಿಯನ್ನು ಕಷ್ಟಸುಖಗಳ ಪಾಲು ಮಾಡುತ್ತಿದೆ. ಜೀವಿಯು ತನ್ನ ಶರೀರದಲ್ಲಿಯೇ ಅನುಭವಿಸುವ ಕಷ್ಟಗಳನ್ನು ಶಿಕ್ಷೆ ಎನ್ನುತ್ತಿದ್ದೇವೆಂದು, ಹಾಗೆಯೇ ಜೀವಿಯು ಅನುಭವಿಸುವ ಸುಖಗಳನ್ನು

ಅಕ್ಷ ಎನ್ನುತ್ತಿದ್ದೇವೆಂದು ಹೇಳಿಕೊಂಡಿದ್ದೇವೆ. ನೀವು ಮೊದಲೇ ಅಕ್ಷ ಅಂದರೆ ಏನು? ಎಂದು ಕೇಳಿದರೆ ಪ್ರಶ್ನೆಗೆ ಉತ್ತರ ಈಗ ಬರುತ್ತದೆ ನೋಡಿ.

ಕಷ್ಟವನ್ನು ಸೂಚಿಸುವ ಶಿಕ್ಷೆಯಲ್ಲಾಗಲಿ, ಸುಖವನ್ನು ಸೂಚಿಸುವ ಅಕ್ಷಯಲ್ಲಾಗಲಿ ಎರಡು ಪದಗಳಲ್ಲಿ "ಕ್ಷ" ಎನ್ನುವ ಶಬ್ದ ಇದೆ. "ಕ್ಷ" ಎಂದರೆ ನಾಶವೆಂದು, ಕ್ಷೀಣಿಸಿ ಹೋಗುವುದೆಂದು ಅರ್ಥವಿದೆ. "ಶಿ" ಎಂದರೆ ಅಡ್ಡ ಇಲ್ಲದಂತೆ ಇಲ್ಲವೇ ಶೀಘ್ರವಾಗಿ ಎಂದು ಅರ್ಥ. ಬೇಗನೆ ನಾಶ ಹೊಂದುವುದನ್ನು, ಆತಂಕ ಇಲ್ಲದಂತೆ ಬಲಹೀನಪಡುವುದನ್ನು ಶಿಕ್ಷೆ ಎನ್ನುತ್ತಿದ್ದೇವೆ. ಹಾಗೆಯೇ ಅಕ್ಷ ಅನ್ನುವ ಪದದಲ್ಲಿ 'ಅ' ಕಾರವು ಅಡ್ಡವನ್ನು ಉಂಟುಮಾಡುವುದು ಅಥವಾ ನಿವಾರಿಸುವುದು ಎಂದು ಅರ್ಥ ಕೊಡುತ್ತಿದೆ. ಅಶ್ರದ್ಧೆ ಎನ್ನುವ ಪದವನ್ನು ತೆಗೆದುಕೊಂಡು ನೋಡಿದರೆ ಶ್ರದ್ಧೆ ಇಲ್ಲದಂತೆ ಹೋಗುವುದು ಎಂದು ಹೇಳಬಹುದು. ವಿವೇಕಕ್ಕೆ "ಅ" ಅನ್ನುವ ಶಬ್ದವನ್ನು ಸೇರಿಸಿದರೆ ಅವಿವೇಕ ವಾಗುತ್ತದೆ ಇರುವ ವಿವೇಕವು ಕ್ಷೀಣಿಸಿ ಹೋಗಿದೆಯೆಂದು ಇಲ್ಲದಂತೆ ಹೋಗಿದೆಯೆಂದು ತಿಳಿಯುತ್ತಿದೆ. ಹಾಗೆಯೇ "ಕ್ಷ" ಅನ್ನುವ ಶಬ್ದಕ್ಕೆ "ಅ" ಅನ್ನುವ ಶಬ್ದವನ್ನು ಸೇರಿಸಿದರೆ ನಾಶ ಇಲ್ಲವೆಂದು, ಬಲಹೀನತೆ ಇಲ್ಲವೆಂದು ತಿಳಿಯುತ್ತಿದೆ. ನಾಶದಲ್ಲಿಯೂ, ಬಲಹೀನತೆಯಲ್ಲಿಯೂ ಜೀವಿಯು ಬಾಧೆಪಡುತ್ತಿದ್ದಾನೆ. ಆದ್ದರಿಂದ ಆತಂಕವಿಲ್ಲದ ಇಲ್ಲವೆ ತಕ್ಷಣ ಹೊಂದುವ ದುಃಖವನ್ನು ಶಿಕ್ಷೆ ಎಂದು ಹಿರಿಯರು ಹೇಳಿದ್ದಾರೆ. ಹಾಗೆಯೇ ಬಲಹೀನತೆ ಇಲ್ಲದಂತೆ ನಾಶ ಇಲ್ಲದಂತೆ ಇರುವಾಗ ಹೊಂದುವ ಸುಖವನ್ನು ಅಕ್ಷ ಎಂದು ಹೇಳುವುದು ನಡೆಯುತ್ತಿದೆ.

ಶರೀರದಲ್ಲಿ ಜೀವಿಯು ಹೊಂದುವ ದುಃಖವನ್ನು ಶಿಕ್ಷ ಎಂದೂ, ಹಾಗೆಯೇ ಜೀವಿಯು ಹೊಂದುವ ಸುಖವನ್ನು ಇಲ್ಲವೆ ಸಂತೋಷವನ್ನು ಅಕ್ಷ ಎಂದೂ ಅನ್ನುತ್ತಿದ್ದೇವೆ ಅಲ್ಲವೆ! ಒಬ್ಬ ಜೀವಿಯು ಹೊಂದುವ ಶಿಕ್ಷೆಗಳು, ಅಕ್ಷಗಳು ಪ್ರಕೃತಿ ಮಾರ್ಗದೊಳಗಿನವು, ದೈವ ಮಾರ್ಗದೊಳಗಿನವು ಎಂದು

ಎರಡು ವಿಧಗಳು ಇವೆ. ಪ್ರಕೃತಿ ಮಾರ್ಗದಲ್ಲಿ ಪ್ರತಿ ಮನುಷ್ಯ ಶಿಕ್ಷ ಅಕ್ಷಗಳನ್ನು ಅನುಭವಿಸುತ್ತಿದ್ದಾನೆ. ಅವು ಪಾಪಪುಣ್ಯಗಳೆನ್ನುವ ಕರ್ಮ ಮೂಲವಾಗಿ ಬರುತ್ತಿವೆ ಎಂದು, ಅವುಗಳನ್ನು ವಿಧಿಯಾಗಿ ಅನುಭವಿಸುವಂತೆ ಮಾಡುವವನು ಆತ್ಮ ಎಂದು ತಿಳಿದುಕೊಂಡಿದ್ದೇವೆ. ದೈವಮಾರ್ಗದಲ್ಲಿ ಶಿಕ್ಷ ಅಕ್ಷಗಳಿದ್ದರೂ, ಅವುಗಳನ್ನು ಸಹ ವಿಧಿಸುವವನು ಆತ್ಮವೇ ಆದರೂ, ಅವು ಕರ್ಮವನ್ನನುಸರಿಸಿ ಇರುವುದಿಲ್ಲ. ಹೊರಗೆ ಕೋರ್ಟಿನಲ್ಲಿ ಶಿಕ್ಷೆಗಳು ಕಾನೂನಿನ ಪ್ರಕಾರ ಇದ್ದರೆ, ಪ್ರಕೃತಿ ಜನಿತ ಶರೀರದಲ್ಲಿನ ಶಿಕ್ಷೆಗಳು ಕರ್ಮವನ್ನನುಸರಿಸಿ ಇದ್ದರೆ, ದೈವಮಾರ್ಗ ದಲ್ಲಿನ ಶಿಕ್ಷೆಗಳು ಧರ್ಮಾಧರ್ಮಗಳನ್ನು ಅನುಸರಿಸಿರುತ್ತವೆ. ಇಲ್ಲಿ ಸ್ವಲ್ಪ ವಿವರವಾಗಿ ಅರ್ಥ ಮಾಡಿಕೊಳ್ಳಬೇಕಾಗಿರುವುದು ಏನೆಂದರೆ! ಮನುಷ್ಯನಿಂದ ಮಾಡುವ ಕೆಲಸವಾಗಲಿ, ಮಾತನಾಡುವ ಮಾತಾಗಲಿ, ಬುದ್ಧಿಯಿಂದ ಹೇಳುವ ಸಿದ್ಧಾಂತ ಗಳಾಗಲಿ, ಆಲೋಚನೆಗಳಾಗಲಿ ಪ್ರತಿಭೆಗಳಾಗಲಿ ಎಲ್ಲಾ ಆತ್ಮನಿಂದಲೇ ಬರುತ್ತಿವೆ. ಜೀವಿಯ ಇಷ್ಟವನ್ನನುಸರಿಸಿ ಯಾವುದೂ ಇರುವುದಿಲ್ಲ. ಎಲ್ಲಾ ಆತ್ಮನಿಂದಲೇ ನಡೆಯುತ್ತಿರುತ್ತದೆ. ಮನುಷ್ಯ ತನ್ನ ಅಜ್ಞಾನದಿಂದ ಆತ್ಮ ಮಾಡುವ ಎಲ್ಲಾ ಕೆಲಸಗಳನ್ನು ತಾನೇ ಮಾಡುತ್ತಿದ್ದೇನೆಂದು ಭ್ರಮಿಸಿದರೂ, ಭ್ರಮಿಸದೆ ಹೋದರು ಆತ್ಮವೇ ಸರ್ವವನ್ನು ಮಾಡುತ್ತಿದೆ. ಯಾವ ಕೆಲಸ ಜೀವಿಯು ಮಾಡುವುದಕ್ಕೆ ಹಕ್ಕು ಆಗಲಿ, ಅವಕಾಶವಾಗಲಿ ಇಲ್ಲ. ಎಲ್ಲಾ ಕರ್ಮವನ್ನನುಸರಿಸಿ ಆತ್ಮ ಶರೀರದಿಂದ ಮಾಡಿಸುತ್ತಿರುತ್ತದೆ.

ಆದರೆ ದೈವಮಾರ್ಗದಲ್ಲಿ ಮಾತ್ರ ಯಾವ ಜೀವಿಗೆ ಕರ್ಮ ಇರುವುದಿಲ್ಲ. ದೈವಮಾರ್ಗದಲ್ಲಿ ಕರ್ಮವನ್ನು ಅನುಸರಿಸಿಯೇ ಕೆಲಸಗಳು ನಡೆಯುತ್ತ ವೆಂಬುವುದು ಯಾವಮಾತ್ರ ಇಲ್ಲ. ಪ್ರಕೃತಿ ಮಾರ್ಗದಲ್ಲಿ ಕಾರ್ಯಗಳ ವಿಷಯದಲ್ಲಿ ಯಾವ ಹಕ್ಕು ಇಲ್ಲದ ಜೀವಿಗೆ, ದೈವಮಾರ್ಗದಲ್ಲಿ ಸಂಪೂರ್ಣವಾದ ಸ್ವತಂತ್ರವಿದೆ. ಜೀವಿಯು ದೈವ ಮಾರ್ಗದಲ್ಲಿ ತನ್ನ ಇಷ್ಟಪ್ರಕಾರ ಮಾಡುವುದಕ್ಕೆ ಪೂರ್ತಿ ಹಕ್ಕು ಹೊಂದಿದ್ದಾನೆ. ದೈವಮಾರ್ಗದಲ್ಲಿನ ಕೆಲಸಗಳೆಲ್ಲಾ ಜೀವಿಯ ಇಷ್ಟದ ಮೇಲೆ ಆಧಾರಪಟ್ಟಿರುತ್ತವೆ. ಪ್ರಪಂಚ ವಿಷಯಗಳಲ್ಲಿ ಜೀವಿಗೆ ಯಾವ ವಿಧವಾಗಿ

ಅಸ್ವತಂತ್ರ ಇದೆಯೋ, ಹಾಗೆ ದೈವ ಮಾರ್ಗದಲ್ಲಿ ಜೀವಿಗೆ ಪೂರ್ತಿ ಸ್ವತಂತ್ರ ಇದೆಯೆಂದು ಹೇಳಬಹುದು. ಪ್ರಪಂಚ ಸಂಬಂಧವಾದ ಕೆಲಸಗಳೆಲ್ಲಾ ಕರ್ಮಾಧೀನದ ಪ್ರಕಾರವಿರುವಾಗ, ದೈವಸಂಬಂಧ ಕೆಲಸಗಳೆಲ್ಲಾ ಸ್ವಲ್ಪವೂ ಕರ್ಮಕ್ಕೆ ಸಂಬಂಧ ಇಲ್ಲದಂತೆ ಎಲ್ಲಾ ಜೀವಿಯ ಇಷ್ಟದ ಪ್ರಕಾರ ನಡೆಯುತ್ತದೆ. ದೈವ ಸಂಬಂಧ ಕಾರ್ಯಗಳು ಜೀವಿಗೆ ಜನ್ಮ ಹಕ್ಕಾಗಿ ಇವೆ. ಆದರೆ ಅವು ಜೀವಿಯ ಇಷ್ಟದ ಮೇಲೆ ಆಧಾರವಾಗಿರುತ್ತವೆ. ದೈವ ಮಾರ್ಗದಲ್ಲಿ ಇಷ್ಟ ವಿರುವವನು ತನ್ನ ಇಷ್ಟದ ಪ್ರಕಾರ ಎಷ್ಟಾದರೂ ಸಾಧಿಸುತ್ತಾನೆ. ಎಂತಹ ಜ್ಞಾನವನ್ನಾದರೂ ಪಡೆಯುತ್ತಾನೆ. ಪ್ರತಿ ಮನುಷ್ಯನಿಗೆ ದೈವಮಾರ್ಗದಲ್ಲಿ ಎಷ್ಟಾದರೂ ಮುಂದಕ್ಕೆ ಹೋಗುವ ಅವಕಾಶ ಇದ್ದರೂ, ಜೀವಿಗೆ ಇಷ್ಟ ಇಲ್ಲದಿರುವುದರಿಂದ ದೈವಮಾರ್ಗದಲ್ಲಿ ಪ್ರಯಾಣಿಸಲಾರದೆ ಹೋಗುತ್ತಿದ್ದಾನೆ. ಕೆಲವರಿಗೆ ದೈವಮಾರ್ಗದಲ್ಲಿ ಇಷ್ಟವಿದ್ದರೂ ಅದು ಅಷ್ಟಷ್ಟು ಮಾತ್ರವೇ ಇದೆ. ಆದ್ದರಿಂದ ಅವರಿಗೆ ಜ್ಞಾನ ಅಷ್ಟಷ್ಟೇ ಲಭಿಸುತ್ತಿದೆ. ಇಷ್ಟವನ್ನೇ ಶ್ರದ್ಧೆ ಎಂದು ಸಹ ಅನ್ನುತ್ತೇವೆ. ಮನುಷ್ಯನಿಗಿರುವ ಶ್ರದ್ಧೆಯನ್ನನುಸರಿಸಿ ಜ್ಞಾನ ಲಭಿಸುತ್ತಿದೆ. ಎಷ್ಟು ಶ್ರದ್ಧೆ ಇರುವವರಿಗೆ ಅಷ್ಟೇ ಲಭಿಸುತ್ತಿದೆ. ಆದ್ದರಿಂದಲೇ ಗೀತೆಯಲ್ಲಿ ಜ್ಞಾನಯೋಗದಲ್ಲಿ 39ನೇ ಶ್ಲೋಕದಲ್ಲಿ "ಶ್ರದ್ಧಾವಾನ್ ಲಭತೇ ಜ್ಞಾನಂ" ಎಂದು ಹೇಳಿದ್ದಾರೆ. ಕರ್ಮವಾನ್ ಲಭತೇ ಕಾರ್ಯಮ್ ಎನ್ನುವಂತೆ ಕರ್ಮವನ್ನನುಸರಿಸಿ ಕಾರ್ಯಗಳು ನಡೆಯುತ್ತವೆ, ಮನುಷ್ಯನ ಶ್ರದ್ಧೆಯನ್ನನುಸರಿಸಿ ನಡೆಯುವುದಿಲ್ಲ.

ಮನುಷ್ಯ ಕರ್ಮವನ್ನನುಸರಿಸಿ ನಡೆಯುವ ಕಾರ್ಯಗಳಲ್ಲಿ ಶಿಕ್ಷೆ ಅಕ್ಷ ಎರಡೂ ಇರುವಂತೆ, ಮನುಷ್ಯ (ಜೀವಿಯ) ಒಂದರ ಶ್ರದ್ಧಯನ್ನನುಸರಿಸಿ ನಡೆಯುವ ಜ್ಞಾನದಲ್ಲಿ ಸಹ ಶಿಕ್ಷೆ ಅಕ್ಷಗಳು ಎರಡೂ ಇವೆ. ಇವುಗಳನ್ನು ಸಹ ದೇವರು ನಿರ್ಣಯಿಸಿದಂತೆ ಆತ್ಮ ಮಾಡುತ್ತಿದೆ. ಪ್ರಪಂಚ ವಿಷಯಗಳಲ್ಲಾಗಲಿ, ಪರಮಾತ್ಮ ವಿಷಯಗಳಲ್ಲಾಗಲಿ ಜೀವಿಯು ಕಾರ್ಯರೂಪವಾಗಿ ಏನು ಮಾಡದಿದ್ದರೂ, ಎರಡು ಮಾರ್ಗಗಳಲ್ಲಿಯೂ ಕಾರ್ಯರೂಪವಾಗಿ ಮಾಡುವುದು ಆತ್ಮ ಎಂದು ತಿಳಿಯಬೇಕು. ಶರೀರವನ್ನು ಯಾವ ಮಾರ್ಗದಲ್ಲಿ ನಡೆಸಬೇಕಾಗಿ

ಬಂದರೂ, ಶರೀರಕ್ಕೆ ಅಧಿಪತಿಯಾದ ಆತ್ಮ ನಡೆಸಬೇಕಾಗಿದ್ದೇಯಾಗಲಿ ಜೀವಿಯಾಗಲಿ, ದೇವರಾಗಲಿ ಶರೀರವನ್ನು ನಡೆಸುವುದಿಲ್ಲ. ಜೀವಿಯು ಸಹ ದೇವರಂತೆ ಯಾವ ಕಾರ್ಯವನ್ನು ಮಾಡದಂತೆ ಶರೀರದಲ್ಲಿ ತನ್ನವರೆಗೂ ಬಂದಿರುವ ಅನುಭವಗಳನ್ನು ಮಾತ್ರ ಹೊಂದುತ್ತಿದ್ದಾನೆ. ಇತ್ತ ಜೀವಿಯಾಗಲಿ ಅತ್ತ ದೇವರಾಗಲಿ ಮಾಡದ ಕಾರ್ಯಗಳೆಲ್ಲವನ್ನು, ಮಧ್ಯದಲ್ಲಿರುವ ಆತ್ಮ ಒಂದು ಕ್ಷಣವೂ ಸಹ ಸುಮ್ಮನಿರದೆ ಯಾವಾಗಲೂ ಮಾಡುತ್ತಲೇ ಇದೆ. ಒಬ್ಬ ಸೈಂಟಿಸ್ಟು ಒಂದು ಹೊಸ ಸೂತ್ರದ ಪ್ರಕಾರ ಒಂದು ಹೊಸ ಔಷಧವನ್ನು ಕಂಡುಹಿಡಿದರೂ, ಹೊಸ ಪರಿಕರವನ್ನು ಕಂಡುಹಿಡಿದರು ಅದೆಲ್ಲವೂ ನಿಜವಾಗಲೂ ಆತ್ಮವೇ ಮಾಡುತ್ತಿದ್ದರೂ ನಾನು ಕಂಡುಹಿಡಿದಿದ್ದೇನೆಂದು ಅವನು (ಜೀವಾತ್ಮ) ಅಂದುಕೊಳ್ಳುತ್ತಾನೆ. ಇಂತಹವನು ಕಂಡುಹಿಡಿದಿದ್ದಾನೆಂದು ಪಕ್ಕದವರೆಲ್ಲರೂ ಅಂದುಕೊಳ್ಳುತ್ತಾರೆ. ವಾಸ್ತವವಾಗಿ ಎಲ್ಲರದೂ ತಪ್ಪು.

ಪ್ರಪಂಚ ಕಾರ್ಯಗಳಲ್ಲಿ ಪಂಡಿತನ ಹತ್ತಿರದಿಂದ ಪಾಮರನವರೆಗೂ, ಪಾರಿಶ್ರಾಮಿಕ ತಜ್ಞನಿಂದ ಕೆಲಸದವನವರೆಗೂ, ಮೇಧಾವಿಯಿಂದ ಸಾಮಾನ್ಯ ನವರೆಗೂ, ಸೈಂಟಿಷ್ಟಿನಿಂದ ಮತಿಯಿಲ್ಲದ ಶಾಡಿಷ್ಟನವರೆಗೂ, ರಾಜನಿಂದ ಬಡವನವರೆಗೂ ಪ್ರಪಂಚ ಸಂಬಂಧವಾಗಿ ಆತ್ಮವೇ ಅಹರ್ನಿಶೆಗಳು ಎಲ್ಲಾ ಕೆಲಸಗಳು ಮಾಡುತ್ತಿರುವುದು ಅಲ್ಲವೆ! ಅದೇ ವಿಧವಾಗಿ ದೈವಮಾರ್ಗದಲ್ಲಿ ದೊಡ್ಡ ಜ್ಞಾನಿಯಿಂದ ಚಿಕ್ಕ ಜ್ಞಾನಿಯವರೆಗೂ ಆತ್ಮ ಎಲ್ಲರನ್ನು ನಡೆಸುತ್ತಿದೆ. ಯಾರ ಶ್ರದ್ಧೆಯನ್ನನುಸರಿಸಿ ಅವನಿಗೆ ಜ್ಞಾನ ಅರ್ಥವಾಗುವಂತೆ ಆತ್ಮವೇ ಮಾಡುತ್ತಿದೆ. ಜ್ಞಾನಮಾರ್ಗದಲ್ಲಿ ಯಾರನ್ನು ಎಂತಹ ಸ್ಥಾನಕ್ಕೆ ತೆಗೆದುಕೊಂಡು ಹೋಗಬೇಕೋ ಅಂತಹ ಸ್ಥಾನಕ್ಕೆ ತೆಗೆದುಕೊಂಡು ಹೋಗುವುದು ಆತ್ಮ ಎಂದು ಮರೆಯಬಾರದು. ಹಾಗೆಯೇ ದೈವಮಾರ್ಗದಲ್ಲಿ ತಪ್ಪಿಗೆ ತಕ್ಕಂತೆ ಶಿಕ್ಷೆ, ಒಪ್ಪಿಗೆ ತಕ್ಕಂತೆ ಅಕ್ಷವನ್ನು ಜಾರಿ ಮಾಡುವವನು ಸಹ ಆತ್ಮವೇ ಎಂದು ತಿಳಿಯಬೇಕು. ಪ್ರಪಂಚ ವಿಧಾನದಲ್ಲಾಗಲಿ, ಪರಮಾತ್ಮ ವಿಧಾನದಲ್ಲಾಗಲಿ ಆತ್ಮ ಮಾಡದ ಕೆಲಸವಂತೂ ಏನು ಇಲ್ಲ.

ಇದನ್ನನುಸರಿಸಿ ನೋಡಿದರೆ ತೀರ್ಪುಗಳಲ್ಲಿ ಸಹ ಪ್ರಕೃತಿ ತೀರ್ಪು, ಪರಮಾತ್ಮ ತೀರ್ಪು ಎಂದು ಎರಡು ವಿಧಗಳಾಗಿ ವಿಭಜಿಸಿಕೊಂಡು ನೋಡಬಹುದು. ಪ್ರಕೃತಿ ತೀರ್ಪು ಶರೀರದ ಮೇಲೆ ಬೀಳುತ್ತದೆ, ಅದರಿಂದ ಸ್ವರ್ಗ, ನರಕಗಳೆಂಬುವವುಗಳನ್ನು ಕಷ್ಟ ಸುಖ ರೂಪಗಳಲ್ಲಿ ಅನುಭವಿಸಬೇಕಾಗಿ ಬರುತ್ತದೆ. ಪರಮಾತ್ಮ ತೀರ್ಪು ಎನ್ನುವುದು ಸೂಕ್ಷ್ಮರೂಪವಾದ ಜೀವಿಯ ಮೇಲೆ ಬೀಳುತ್ತದೆ, ಅದರಿಂದ ಜನ್ಮ, ಮೋಕ್ಷಗಳನ್ನು ಹೊಂದಬೇಕಾಗಿ ಬರುತ್ತದೆ. ಪ್ರಪಂಚ ಸಂಬಂಧ ತೀರ್ಪಿನಲ್ಲಿನ ಶಿಕ್ಷೆಗಿಂತ, ಪರಮಾತ್ಮ ತೀರ್ಪಿನಲ್ಲಿನ ಜನ್ಮಗಳು ಭಯಂಕರವಾದವೆಂದು ಹೇಳಬಹುದು. ಪ್ರಪಂಚ ಸಂಬಂಧ ತೀರ್ಪಿನಲ್ಲಿ ಬರುವ ಪಾಪವು ಮರುಜನ್ಮದಲ್ಲಿ ಶಿಕ್ಷೆಯಾಗಿ ಅನುಭವಿಸಬಹುದು. ಆದರೆ ಪರಮಾತ್ಮ ತೀರ್ಪಿನಲ್ಲಿ ಬರುವ ಜನ್ಮಗಳು ಒಂದು ಜನ್ಮಕ್ಕೆ ಮುಗಿದುಹೋಗುವುದಿಲ್ಲ, ಯುಗಗಳ ಪರ್ಯಂತವು ಇರುತ್ತದೆ. ಆದ್ದರಿಂದ ಪರಮಾತ್ಮ ತೀರ್ಪು ಬಹಳ ಭಯಂಕರವಾದುದು. ಪರಮಾತ್ಮ ತೀರ್ಪಿನಲ್ಲಿ ಬರುವ ಅಕ್ಷ ಬಂದರೆ ಅದು ಜನ್ಮಗಳು ಇಲ್ಲದಂತೆ ಮೋಕ್ಷವನ್ನು ಉಂಟುಮಾಡುತ್ತದೆ. ಶಿಕ್ಷೆ ಬಂದರೆ ಜನ್ಮ ಪರಂಪರೆಯಲ್ಲಿ ಮಾನವನು (ಜೀವಿಯು) ಸಿಲುಕಿಕೊಳ್ಳುತ್ತಾನೆ. ಬಹಳ ಜನರಿಗೆ ಶಿಕ್ಷೆ ಎನ್ನುವ ಪದವು ಸುಪರಿಚಯವೇ, ಆದರೆ ಅಕ್ಷ ಎನ್ನುವ ಪದವು ಎಲ್ಲರಿಗೂ ಬಹುಶಃ ತಿಳಿದಿಲ್ಲವೆಂದೇ ಹೇಳಬಹುದು. ಸ್ವಲ್ಪ ಆಲೋಚಿಸಿ ನೋಡಿದರೆ ಅಕ್ಷ ಎನ್ನುವುದು ಪೂರ್ವದಲ್ಲಿ ಮನುಷ್ಯರ ಮಧ್ಯದಲ್ಲಿರುವ ಪದವೇ. ಪೂರ್ವದಲ್ಲಿ ಅಕ್ಷ ಎಂದು ಕರೆಯುವ ಪದವು ಈದಿನ ಮೋಕ್ಷವಾಗಿ ಕರೆಯಲಾಗುತ್ತಿದೆ. ಪೂರ್ವದಲ್ಲಿ "ಅಕ್ಷ" ವಾಗಿರುವ ಪದವು ಕಾಲಕ್ರಮವಾಗಿ "ಮೋಕ್ಷ" ಎನ್ನುವ ಪದವಾಗಿ ಬದಲಾವಣೆಯಾಗಿದೆ. "ಕ್ಷ" ಮುಂದೆ "ಅ" ಹೋಗಿ "ಮೋ" ಬರುವುದು ನಡೆದಿದೆ. ನಂತರ ಸ್ವಲ್ಪ ಕಾಲಕ್ಕೆ ಮೋಕ್ಷ ಎಂದು ಹೇಳಲಾಗುತ್ತಿದೆ. ಪೂರ್ವದಲ್ಲಿ ಅಕ್ಷ ಎನ್ನುವ ಪದವನ್ನು ಪ್ರಪಂಚ ಸಂಬಂಧ ಕಷ್ಟಗಳು ತೊಲಗಿಹೋದಾಗಲೂ ಸಹ ಬಳಸುತ್ತಿದ್ದರು. ಈ ದಿನಗಳಲ್ಲಿ ಕೂಡ ಪ್ರಪಂಚ ಕಷ್ಟಗಳಿಂದ ಹೊರಬಿದ್ದಾಗ, ಕಷ್ಟಗಳಿಂದ ಮೋಕ್ಷ ಲಭಿಸಿದೆ

ಎನ್ನುವುದು ನಡೆಯುತ್ತಿದೆ. ಕಾಲಗಮನದಲ್ಲಿ **'ಅ' 'ಮೋ'** ಆಗಿ ಬದಲಾದರೂ ಪದದಲ್ಲಿ ಮುಖ್ಯವಾದ ಅರ್ಥ ಹೊಂದಿರುವ **"ಕ್ಷ"** ಮಾತ್ರ ಬದಲಾಗಲಿಲ್ಲ.

ತೀರ್ಪಿನಲ್ಲಿ ಶಿಕ್ಷೆ ಇರಬಹುದು. ಹಾಗೆಯೇ ಅಕ್ಷ (ಮೋಕ್ಷ) ಇರಬಹುದು. ತೀರ್ಪು ಪ್ರಪಂಚ ಸಂಬಂಧವಾದದು ಆಗಬಹುದು ಅಥವಾ ಪರಮಾತ್ಮ ಸಂಬಂಧವಾದುದು ಆಗಬಹುದು. ಎರಡು ವಿಧಗಳ ತೀರ್ಪುಗಳನ್ನು ಮೊದಲೇ ದೇವರು ನಿರ್ಣಯಿಸಿರುವಾಗ ಅದನ್ನೇ ಆತ್ಮ ಜಾರಿ ಮಾಡುತ್ತಿದೆ. ಆತ್ಮ ಜಾರಿ ಮಾಡಿದರು ಮೊದಲು ಅದು ದೇವರ ತೀರ್ಪೆಂದೇ ಹೇಳಬಹುದು. ಮನುಷ್ಯನಿಗೆ ಸಂಭವಿಸುವ ಪ್ರಪಂಚ ಸಂಬಂಧ ಕಷ್ಟಸುಖಗಳಾಗಲಿ, ಜನ್ಮ ಮೋಕ್ಷಗಳಾಗಲಿ ಏನಾದರೂ ದೇವರಿಗೆ ತಿಳಿಯದಂತೆ ನಡೆಯುವುದಿಲ್ಲ. ಏನಾದರು ದೇವರ ತೀರ್ಪನ್ನು ಅನುಸರಿಸಿಯೇ ಇರುತ್ತದೆ ಎಂದು ಜ್ಞಾಪಕ ಇಟ್ಟುಕೊಳ್ಳಬೇಕು. ದೇವರ ತೀರ್ಪು ಹೇಗಿರುತ್ತದೋ ಮೊದಲು ಯಾರಿಗೂ ತಿಳಿಯುವುದಿಲ್ಲ. ಆದರೆ ಯಾರಿಗೆ ಯಾವ ತೀರ್ಪು ವಿಧಿಸಲ್ಪಟ್ಟಿದೆಯೋ, ಯಾರು ಏನು ಅನುಭವಿಸುತ್ತಾನೋ ಎಲ್ಲಾ ದೇವರಿಗೆ ಮೊದಲೇ ಗೊತ್ತು. ಇದೇ ವಿಷಯವನ್ನು ಕುರಿತು ಭಗವದ್ಗೀತೆಯಲ್ಲಿ ವಿಜ್ಞಾನಯೋಗದಲ್ಲಿ 26ನೇ ಶ್ಲೋಕದಲ್ಲಿ ಹೀಗೆ ಹೇಳಲಾಗಿದೆ ನೋಡಿ.

**26ನೇ ಶ್ಲೋ॥ : ವೇ ದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿ ಮಾಂತು ವೇದ ನ ಕಶ್ಚನ ॥**

**ಭಾವಾರ್ಥ :–** ಸರ್ವ ಜೀವರಾಶಿಗಳಿಗೂ ಜಗತ್ತಿನಲ್ಲಿ ನಡೆದಿರುವವು, ನಡೆಯುತ್ತಿರುವವು, ಭವಿಷ್ಯತ್ತಿನಲ್ಲಿ ನಡೆಯುವ ವಿಷಯಗಳೆಲ್ಲಾ ನನಗೆ ತಿಳಿದಿದೆ. ಆದರೆ ಎಲ್ಲರ ಭೂತ ಭವಿಷ್ಯತ್ ವರ್ತಮಾನಗಳನ್ನು ತಿಳಿದ ನಾನು ಯಾರಿಗೂ ತಿಳಿಯಲಿಲ್ಲ.

ಎಲ್ಲರೂ ದೇವರಿಗೆ ಗೊತ್ತು, ಆದರೆ ದೇವರು ಯಾರಿಗೂ ತಿಳಿದಿಲ್ಲ. ದೇವರು ಪುರುಷನಾಗಿದ್ದು, ಆತ್ಮ, ಜೀವಾತ್ಮಗಳು ಸಹ ಪುರುಷರಾಗಿಯೇ ಇದ್ದಾರೆ. ಎರಡನೇ ಪುರುಷನಾದ ಆತ್ಮ ಶರೀರದಲ್ಲಿ ಎಲ್ಲಾ ಕಾರ್ಯಗಳು ಮಾಡುತ್ತಿದ್ದರೂ, ಆತ್ಮ ಯಾವ ಕಾರ್ಯಕ್ಕೂ ಕರ್ತ ಅಲ್ಲ. ಕರ್ಮಪ್ರಕಾರ ನಿಮಿತ್ತಮಾತ್ರನಾಗಿ ಆತ್ಮ ಕೆಲಸ ಮಾಡುತ್ತಿದೆ. ಆದ್ದರಿಂದ ಆತ್ಮವನ್ನು ಕರ್ತ ಅಲ್ಲ ಎಂದಿದ್ದೇವೆ. ಎಲ್ಲದಕ್ಕೂ ಕಾರಣಕರ್ತನಾಗಿ ಮೂಲ ಪುರುಷನಾದ ದೇವರಿದ್ದರೂ, ಪ್ರಸ್ತುತ ಆತನು ಸ್ಥಬ್ದನಾಗಿದ್ದಾನೆ. ಆತ್ಮ ಶರೀರದಲ್ಲಿ ಮಾತ್ರ ವಿಧಿಯನ್ನು ಅನುಸರಿಸಿ ಮಾಡುತ್ತಿದೆ. ಶರೀರಗಳ ಹೊರಗೆ ಅನಂತ ವಿಶ್ವದಲ್ಲಿಯೂ, ಶರೀರದೊಳಗೂ ಕಾರ್ಯಗಳಿಗೆಲ್ಲಾ ಕರ್ತನಾಗಿ ಕಾರ್ಯಗಳನ್ನು ಮಾಡಿಸುವುದು ಪ್ರಕೃತಿ ಎಂದು ಹೇಳಬಹುದು. ದೇವರ ನಂತರ ದೇವರಂತಹ ಶಕ್ತಿ ಹೊಂದಿರುವುದು ಪ್ರಕೃತಿ. ಪ್ರಕೃತಿಯನ್ನು ಅನುಸರಿಸಿಯೇ ಆತ್ಮ ಸಹ ಕೆಲಸ ಮಾಡುತ್ತಿರುವುದರಿಂದ, ಪ್ರಸ್ತುತ ಕರ್ತನಾಗಿರುವುದು ಪ್ರಕೃತಿ ಎಂದು ಹೇಳಬಹುದು. ಇದೇ ವಿಷಯವನ್ನೇ ಭಗವದ್ಗೀತೆಯಲ್ಲಿ ಕ್ಷೇತ್ರ ಕ್ಷೇತ್ರಜ್ಞ ವಿಭಾಗ ಯೋಗದಲ್ಲಿ 30ನೇ ಶ್ಲೋಕದಲ್ಲಿ ಹೀಗೆ ಹೇಳಿದ್ದಾರೆ ನೋಡಿ.

**30ನೇ ಶ್ಲೋ॥ : ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।**
**ಯಃ ಪಶ್ಯತಿ ತಥಾತ್ಮಾನಮಕರ್ತಾರಂ ಸ ಪಶ್ಯತಿ ॥**

**ಭಾವಾರ್ಥ :–** ಸರ್ವ ಕಾರ್ಯಗಳು ಪ್ರಕೃತಿಯಿಂದ ಮಾಡಲ್ಪಡುತ್ತಿವೆಯೆಂದು ಯಾರು ತಿಳಿಯುತ್ತಾರೋ, ಅವನು ಯಾವ ಕಾರ್ಯಕ್ಕೂ ಕರ್ತ ಆತ್ಮ ಅಲ್ಲವೆಂದು ತಿಳಿದಿರುತ್ತಾನೆ. ಹಾಗೆ ತಿಳಿದವನನ್ನು ನಿಜವಾದ ಜ್ಞಾನದೃಷ್ಟಿ ಇರುವವನೆಂದು ಹೇಳಬಹುದು.

ಶರೀರದೊಳಗೆ ಆತ್ಮ ಎಲ್ಲಾ ಮಾಡುತ್ತಿದ್ದರೂ, ಶರೀರದ ಹೊರಗೆ ವಿಶ್ವವೆಲ್ಲಾ ಪ್ರಕೃತಿ ಆವರಿಸಿದ್ದು ಬಿಸಿಲು, ಗಾಳಿ, ಮಳೆ, ಮಂಜಿನಂತಿದ್ದೂ, ಭೂಕಂಪಗಳು, ಸುನಾಮಿಗಳು, ಟೋರ್ನಡೋಲು (ಸುಳಿಮೇಘಗಳು) ತುಫಾನು

ಮೇಘಗಳು (ಕ್ಯುಮುಲೋನಿಂಬಸ್ ಮೇಘಗಳು) ಆಗಿದ್ದು ಹೊರಗೆ ಕಾರ್ಯ ಗಳೆಲ್ಲವನ್ನು ಪ್ರಕೃತಿ ಮಾಡುತ್ತಿದೆ. ವಿಶ್ವದಲ್ಲಿನ ಪ್ರಕೃತಿ ಸ್ವತಂತ್ರ ಇರುವುದಾಗಿ ಇದೆ. ಆತ್ಮ ಶರೀರದಲ್ಲಿ ಶರೀರಕ್ಕೆ ಅಧಿಪತಿಯಾಗಿದ್ದು ಮನುಷ್ಯನ ಕರ್ಮ ವನ್ನನುಸರಿಸಿ ಮನುಷ್ಯನಿಂದ ಕೆಲಸ ಮಾಡಿಸುತ್ತಿರುತ್ತದೆ. ಆತ್ಮ ತನ್ನ ಇಷ್ಟದ ಪ್ರಕಾರ ನಡೆದುಕೊಳ್ಳದೆ, ಕರ್ಮವನ್ನನುಸರಿಸಿ ಮನುಷ್ಯನನ್ನು ನಡೆಸುವುದರಿಂದ ಆತ್ಮ ಸ್ವತಃ ಕರ್ತನಲ್ಲ. ಅಷ್ಟೇ ಅಲ್ಲದೆ ಮನುಷ್ಯನಿಗೆ (ಜೀವಿಗೆ) ಇರುವ ಪಾಪ ಇಲ್ಲವೆ ಪುಣ್ಯದ ಪ್ರಕಾರ ನಡೆಸುವುದೇ ಆತ್ಮದ ಕೆಲಸವಾಗಿದೆ. ಅಷ್ಟೇಯಾಗಲಿ ಯಾರ ಪಾಪವಾಗಲಿ, ಯಾರ ಪುಣ್ಯವಾಗಲಿ ಆತ್ಮ ತೊಲಗಿಸುವುದಿಲ್ಲ. ಅಷ್ಟೇ ಅಲ್ಲದೆ ಕರ್ಮಗಳನ್ನಾಗಲಿ, ಕಾರ್ಯಗಳನ್ನು ಮಾಡಬೇಕೆಂಬ ಆಸೆಯನ್ನಾಗಲಿ, ಕಾರ್ಯಕ್ಕೆ ನಾನೇ ಕರ್ತನೆಂಬ ಭಾವವನ್ನಾಗಲಿ ಆತ್ಮ ಕಲ್ಪಿಸುವುದಿಲ್ಲ. ಜೀವಿಯ ಸ್ವತಃ ಭಾವದಿಂದಲೇ ಅವೆಲ್ಲವೂ ಜೀವಿಗೆ ಉಂಟಾಗುತ್ತಿವೆ. ಇದೇ ವಿಷಯವನ್ನೇ ಭಗವದ್ಗೀತೆಯಲ್ಲಿ ಕರ್ಮ ಸನ್ಯಾಸ ಯೋಗವೆಂಬ ಅಧ್ಯಾಯದಲ್ಲಿ 14, 15 ಶ್ಲೋಕಗಳಲ್ಲಿ ಹೀಗೆ ಹೇಳಿದ್ದಾರೆ ನೋಡಿ.

***14ನೇ ಶ್ಲೋ ॥ ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।***
***ನ ಕರ್ಮಫಲ ಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥***

**ಭಾವಾರ್ಥ :–** ಪಾಪಪುಣ್ಯಗಳೆನ್ನುವ ಕರ್ಮಗಳನ್ನಾಗಲಿ, ನಡೆದ ಕೆಲಸದಲ್ಲಿ ನಾನೇ ಕರ್ತನೆಂಬ ಭಾವವನ್ನಾಗಲಿ, ಕರ್ಮ ಫಲಗಳಲ್ಲಿ ಆಸಕ್ತಿಯನ್ನಾಗಲಿ ಆತ್ಮ ಉಂಟುಮಾಡುವುದಿಲ್ಲ. ಅವೆಲ್ಲವೂ ಜೀವಿಯ ಸ್ವಂತ ಭಾವ (ಇಷ್ಟ) ದಿಂದ ಬರುತ್ತವೆ.

***15ನೇ ಶ್ಲೋ ॥ ನಾದತ್ತೇ ಕಸ್ಯಚಿ ತ್ಪಾಪಂ ನ ಚೈವ ಸುಕೃತಂ ವಿಭುಃ ।***
***ಅಜ್ಞಾನೇ ನಾವೃತಂ ಜ್ಞಾನಂ ತೇನ ಮುಹ್ಯನ್ತಿ ಜನ್ತವಃ ॥***

**ಭಾವಾರ್ಥ :–** ಶರೀರಕ್ಕೆ ಅಧಿಪತಿಯಾಗಿರುವ ಆತ್ಮ ಯಾರ ಪಾಪವನ್ನಾಗಲಿ,

ಯಾರ ಪುಣ್ಯವನ್ನಾಗಲಿ ತೊಲಗಿಸುವುದಿಲ್ಲ. ಆತ್ಮಜ್ಞಾನವೆಲ್ಲವೂ ಅಜ್ಞಾನದಿಂದ ಮುಚ್ಚಲ್ಪಟ್ಟಿದೆ. ಆದ್ದರಿಂದ ಆತ್ಮ ವಿಷಯ ಯಾರಿಗೂ ತಿಳಿಯದಂತಿದೆ.

ಜೀವಿಯ ಶರೀರವೆಲ್ಲವೂ ಪ್ರಕೃತಿಯಿಂದ ತಯಾರು ಮಾಡಲಾಗಿದೆ. ಪಂಚ ಭೂತಗಳಾಗಿರುವ ಪ್ರಕೃತಿ 25 ಭಾಗಗಳಾಗಿ ವಿಂಗಡಿಸಿದ್ದು 25 ಶರೀರ ಭಾಗಗಳಾಗಿ ಮತ್ತು ಅವುಗಳಿಗೆ ಅನುಬಂಧ ಅವಯವಗಳಾಗಿ ತಯಾರಾಗಿದೆ. ಪ್ರಕೃತಿಯಿಂದ ತಯಾರಾದ ಶರೀರದಲ್ಲಿ ಪ್ರಕೃತಿ ಭಾಗಗಳಿಗೆ ಶಕ್ತಿಯನ್ನು ಕೊಟ್ಟು ನಡೆಸುವುದು ಆತ್ಮ. ಪ್ರಕೃತಿಯಿಂದ ಶರೀರವು ತಯಾರಾಗುವುದಲ್ಲದೆ ಶರೀರದಲ್ಲಿನ ಗುಣಗಳು ಸಹ ಪ್ರಕೃತಿಯಿಂದಲೇ ತಯಾರಾಗಿವೆ. ಕಾಣಿಸದ ಗುಣಗಳು ಮನುಷ್ಯನ ತಲೆಯಲ್ಲಿ ಇದ್ದು, ಮನುಷ್ಯನಿಗೆ ಕರ್ಮಗಳನ್ನು ಅಂಟುವಂತೆ ಮಾಡುತ್ತಿವೆ. ಮಾಡಿಸುವುದು ಆತ್ಮವಾದರೂ, ಒಳ್ಳೆಯ ಕೆಟ್ಟ ಕಾರ್ಯಗಳನ್ನು ಗುಣಗಳ ಪ್ರೇರಣೆಯಿಂದ ಪ್ರಕೃತಿ ಮಾಡುತ್ತಿದೆ. ಪ್ರಕೃತಿಯ ಸ್ವಭಾವದಿಂದ ಕಾರ್ಯಗಳ ಮೇಲೆ ಇಷ್ಟ ಉಂಟಾಗುವುದು, ಕಾರ್ಯಗಳು ನಡೆಯುವುದರಿಂದ ಅವುಗಳ ಮೂಲಕ ಪಾಪಪುಣ್ಯಗಳು ಬರುವುದು ನಡೆಯುತ್ತಿದೆ. ಹೊರಗೆ ಕಾಣಿಸುವ ಪ್ರಕೃತಿ, ಶರೀರದಲ್ಲಿ ಕಾಣಿಸದ ಗುಣಗಳಾಗಿ ಇದೆ. ಗುಣಗಳೆಲ್ಲವನ್ನು ಸೇರಿಸಿ ಮಾಯೆ ಎನ್ನುತ್ತಿದ್ದೇವೆ. ಇದರಿಂದ ಕಾಣಿಸುವ ಪ್ರಕೃತಿ ದೇಹದಲ್ಲಿ ಕಾಣಿಸದ ಮಾಯೆಯಾಗಿ ಇದೆಯೆಂದು ಹೇಳಬಹುದು. ಮನುಷ್ಯರಲ್ಲಿನ ಕಾರ್ಯಗಳಲ್ಲಿನ ಆಸಕ್ತಿಗೆ, ಕರ್ಮಗಳಿಗೆ ಪ್ರಕೃತಿ ಕರ್ತನಾಗಿರುವಾಗ, ಆತ್ಮ ಶರೀರಕ್ಕಧಿಪತಿಯಾಗಿ ಶರೀರ ಭಾಗಗಳಿಗೆ ಶಕ್ತಿಯನ್ನು ಕೊಟ್ಟು ನಡೆಸುತ್ತಾ ಕರ್ಮಗಳನ್ನು ಶಿಕ್ಷೆ ಅಕ್ಷಗಳಾಗಿ ಅನುಭವಿಸುವಂತೆ ಮಾಡುತ್ತಿದೆ ಎಂದು ತಿಳಿದುಕೊಂಡಿದ್ದೇವೆ. ಇಲ್ಲಿಯವರೆಗೂ ತಿಳಿದುಕೊಂಡ ಜ್ಞಾನ ಚೆನ್ನಾಗಿ ಜ್ಞಾಪಕ ಇರುವುದಕ್ಕೆ ಕೆಳಗೆ ಒಂದು ಪಟ್ಟಿಯನ್ನು ತೋರಿಸುತ್ತಿದ್ದೇವೆ.

ಇಲ್ಲಿಯವರೆಗೂ ಪ್ರಾಥಮಿಕವಾಗಿ ಪುರುಷರಾದ ಮೂರು ಆತ್ಮಗಳನ್ನು ಕುರಿತು, ಸ್ತ್ರೀ ಆದ ಪ್ರಕೃತಿಯನ್ನು ಕುರಿತು, ಶರೀರದಲ್ಲಿ ಅಧಿಪತಿಯಾಗಿದ್ದು

| | | | | | |
|---|---|---|---|---|---|
| ರೂಪ,ನಾಮ, ಕ್ರಿಯೆಗಳು ಇಲ್ಲದವನು | ಎಲ್ಲದಕ್ಕು ಸೃಷ್ಟಿಕರ್ತ | ಸಾವು ಹುಟ್ಟುಗಳಿಗೆ ಮೂಲಕರ್ತ | ಜನನ ಮರಣಗಳಿಗೆ ಪ್ರಸ್ತುತ ಕರ್ತ | ಶರೀರವನ್ನು ಕದಲಿಸಿ ಎಲ್ಲಾ ಕೆಲಸಗಳು ಮಾಡುವವನು | ಪಾಪ ಕೆಲಸಗಳನ್ನು ಮಾಡುವವನು |
| ↓ | ↓ | ↓ | ↓ | ↓ | ↓ |
| ಪರಮಾತ್ಮ (ಪುರುಷೋತ್ತಮನು) | ಪರಮಾತ್ಮ (ದೇವರು) | ದೇವರು (ಪುರುಷೋತ್ತಮನು) | ಪ್ರಕೃತಿ (ಮಾಯೆ) | ಆತ್ಮ (ಅಕ್ಷರನು) | ಅಕ್ಷರನು (ಆತ್ಮ) |

| | | | | | |
|---|---|---|---|---|---|
| ಪುಣ್ಯ ಕಾರ್ಯಗಳನ್ನು ಮಾಡುವವನು | ಒಳ್ಳೆಯ ಕೆಟ್ಟಕಾರ್ಯಗಳನ್ನು ಮಾಡದವನು | ಸಂಬಂಧವಿಲ್ಲದ ಕರ್ಮವನ್ನು ಅಂಟಿಸಿ ಕೊಳ್ಳುವವನು | ಕಷ್ಟ ಸುಖಗಳನ್ನು ಅನುಭವಿಸುವವನು | ಶರೀರಕ್ಕೆ ಅಧಿಪತಿ | ಜೀವಿಗಳಿಗೆ ಅಧಿಕಾರಿ |
| ↓ | ↓ | ↓ | ↓ | ↓ | ↓ |
| ಚಿತ್ರಗುಪ್ತನು (ಆತ್ಮ) | ಜೀವಾತ್ಮ (ಕ್ಷರನು) | ಕ್ಷರನು (ಜೀವಾತ್ಮ) | ಜೀವಾತ್ಮ (ಕ್ಷರನು) | ಆತ್ಮ (ಚಿತ್ರಗುಪ್ತನು) | ಪ್ರಕೃತಿ (ಮಾಯೆ) |

ಎಲ್ಲವನ್ನು ಮಾಡಿಸುತ್ತಿರುವ ಚಿತ್ರಗುಪ್ತ ಆತ್ಮವನ್ನು ಕುರಿತು ತಿಳಿದುಕೊಂಡಿದ್ದೇವೆ. ಹಾಗೆ ಜೀವಿಯು ತಾನು ಮಾಡದ ತಪ್ಪು ಒಪ್ಪುಗಳಿಗೆ ಅಜ್ಞಾನದಿಂದ ಅನವಶ್ಯವಾಗಿ ಭಾದ್ಯತೆಯುಳ್ಳವನಾಗಿ ಕಷ್ಟ ಸುಖಗಳನ್ನು ಹೊಂದುತ್ತಿದ್ದಾನೆಂದು ಸಹ ತಿಳಿದುಕೊಂಡಿದ್ದೇವೆ. ಇನ್ನೂ ತೀರ್ಪುಗಳಲ್ಲಿ ಎರಡು ವಿಧಗಳ ತೀರ್ಪುಗಳಿವೆ ಎಂದು ಸಹ ಹೇಳಿಕೊಂಡಿದ್ದೇವೆ. ಈಗ ನಮ್ಮಿಂದ ಬರೆಯಲಾದ ಈ ಗ್ರಂಥದಲ್ಲಿನ ಮುಖ್ಯ ಅಂಶ ತೀರ್ಪು ಎನ್ನುವುದೇ, ಆದ್ದರಿಂದ ಇನ್ನು ತೀರ್ಪಿನ ಬಗ್ಗೆ ಹೆಚ್ಚಾಗಿ ಹೇಳಿಕೊಳ್ಳೋಣ. ತೀರ್ಪುಗಳಲ್ಲಿ ಪ್ರಕೃತಿ ಸಂಬಂಧವಾದ ಶಿಕ್ಷೆಗಳನ್ನು ಅಕ್ಷಗಳನ್ನು ಎಲ್ಲರೂ ಪ್ರತ್ಯಕ್ಷವಾಗಿ ಅನುಭವಿಸುತ್ತಿದ್ದರೂ, ಮನುಷ್ಯನಿಗಿರುವ ಅಜ್ಞಾನದಿಂದ ಪುಣ್ಯಗಳಿಗೆ ಸ್ವರ್ಗಲೋಕ, ಪಾಪಗಳಿಗೆ ನರಕಲೋಕ ಇದೆಯೆಂದು ಅಂದುಕೊಳ್ಳುತ್ತಿದ್ದಾನೆ. ಎಲ್ಲಾ ಮತದವರು ತಮ್ಮ ಮತ ಗ್ರಂಥಗಳೆಂದು ಹೇಳುವ ಮೂಲ ಗ್ರಂಥಗಳಲ್ಲಿ ಸ್ವರ್ಗ, ನರಕ ಎನ್ನುವ ಮಾತುಗಳಿರುವುದು ನಿಜವೇ. ಸ್ವರ್ಗ ಸುಖಗಳ ನಿಲಯವೆಂದೂ, ನರಕ ಬಾಧೆಗಳ ನಿಲಯವೆಂದು ಇರುವ ಮಾತು ಕೂಡ ವಾಸ್ತವವೇ. ಆದರೆ ಅವುಗಳಿಗೆ ಪ್ರತ್ಯೇಕ ಲೋಕಗಳಿವೆ ಎಂದು ಯಾವ ಕಾರಣದಿಂದ ಹೇಳಲಿಲ್ಲ. ಮನುಷ್ಯ ಅಜ್ಞಾನದಿಂದ ಇಲ್ಲದ ವಿಷಯವನ್ನು

ಊಹಿಸಿಕೊಂಡು, ತನಗೆ ತಿಳಿಯದ, ಯಾರು ನೋಡದಿರುವ ಸ್ವರ್ಗ, ನರಕಗಳನ್ನು ಪ್ರತ್ಯೇಕ ಲೋಕಗಳಾಗಿ ಹೇಳಿಕೊಳ್ಳುತ್ತಿದ್ದಾನೆ. ಹಾಗೆ ಕುರುಡರಂತೆ ಹೇಳಿ ಕೊಳ್ಳುವುದು ಹೊರತು, ಅವರು ಊಹಿಸಿಕೊಂಡ ಲೋಕಗಳ ಅಡ್ರಸ್ ಅವರಿಗೆ ತಿಳಿದಿಲ್ಲ. ಸೃಷ್ಟಿ ಮೊದಲಾದಾಗಿನಿಂದ ಇಲ್ಲಿಯವರೆಗೂ ಯಾರು ಸ್ವರ್ಗ ನರಕ ಲೋಕಗಳಿಗೆ ಹೋಗಲಿಲ್ಲ. ಯಾರು ಅವುಗಳನ್ನು ನೋಡಲಿಲ್ಲ. ತಮ್ಮ ವಾದನೆ ಗೆಲ್ಲುವುದಕೋಸ್ಕರ ನಾವು ನೋಡಿದ್ದೇವೆಂದು ಯಾರಾದರು ಅಂದರೂ, ಅವರ ಮಾತು ಪೂರ್ತಿ ಅಸತ್ಯ.

ಸ್ವರ್ಗ ನರಕಗಳು ಎನ್ನುವವು ಮನುಷ್ಯ ಅನುಭವಿಸುವ ಅನುಭೂತಿಗಳು ಮಾತ್ರವೆ. ಆದರೆ ಅವು ಪ್ರತ್ಯೇಕವಾದ ಲೋಕಗಳು ಅಲ್ಲ. ಸುಖವನ್ನು ಸ್ವರ್ಗವೆಂದು, ಕಷ್ಟವನ್ನು ನರಕವೆಂದು ಎನ್ನಬಹುದು. ಹಾಗೆ ಅಲ್ಲದೆ ಶಾಸ್ತ್ರಬದ್ಧತೆ ಸ್ವಲ್ಪವೂ ಇಲ್ಲದಂತೆ, ಮೂಢವಾಗಿ ಎಂದುಕೊಂಡರೆ, ಅದು ಅಜ್ಞಾನವಾಗುತ್ತದೆ ಆದರೆ ಜ್ಞಾನ ಆಗುವುದಿಲ್ಲ. 'ತಾನು ಕೆಟ್ಟ ಕೋತಿ ವನವೆಲ್ಲ ಕೆಡಿಸಿತು' ಎನ್ನುವಂತೆ, ಕೆಲವರು ಬೋಧಕರು ತಪ್ಪಾಗಿ ಬೋಧಿಸಿ ಎಲ್ಲರನ್ನು ತಪ್ಪುದಾರಿಯನ್ನು ಹಿಡಿಸುತ್ತಿದ್ದಾರೆ. ಹೀಗೆ ಪ್ರಪಂಚ ವಿಷಯಗಳಲ್ಲಿ ತಪ್ಪಾಗಿ ಭಾವಿಸಿಕೊಂಡರೂ, ಅದರಿಂದ ಪಾಪ ಬರುತ್ತದೆ. ಪಾಪದಿಂದ ಶಿಕ್ಷೆ ನರಕವನ್ನು ಅನುಭವಿಸುವುದೇ ಆಗುತ್ತದೆ. ನರಕ ಎಂದರೆ ಯಾವಾಗಲೂ ಇರುವಂತದಲ್ಲ. ಎಷ್ಟು ಪಾಪ ಬಂದವನಿಗೆ ಅಷ್ಟೇ ನರಕವಿರುತ್ತದೆ. ದುಃಖವನ್ನು ಅನುಭವಿಸುವ ಐದು ಇಲ್ಲವೆ ಹತ್ತು ನಿಮಿಷಗಳನ್ನು ನರಕ ಎನ್ನಬಹುದು. ನರಕ ಕ್ಷಣ ಕಾಲವಿರಬಹುದು, ಬಹಳ ಕಾಲ ಇರಬಹುದು. ನರಕ ಜೀವಿಗೆ ಸಂಕ್ರಮಿಸಿದ ಪಾಪವನ್ನನುಸರಿಸಿ ಇರುತ್ತದೆ. ಹಾಗೆ ಸ್ವರ್ಗವೂ ಸಹ ಜೀವಿಗೆ ಬಂದಿರುವ ಪುಣ್ಯವನ್ನನುಸರಿಸಿ ಇರುತ್ತದೆ. ಮನುಷ್ಯ ಜೀವನದಲ್ಲಿಯೇ ಸ್ವರ್ಗ ಸುಖಗಳು, ನರಕ ಬಾಧೆಗಳು ಇವೆ. ಸ್ವರ್ಗ ಎಂದರೆ ಸುಖ ಎಂದು ಅರ್ಥವಾಗುವಂತೆ ಸ್ವರ್ಗ ಸುಖಗಳೂ ಎಂದೂ, ನರಕ ಎಂದರೆ ದುಃಖ ಎಂದು ಅರ್ಥವಾಗುವಹಾಗೆ ನರಕ ಬಾಧೆಗಳೆಂದು ಎನ್ನುವುದು ನಡೆಯುತ್ತಿದೆ. ಪ್ರಪಂಚದಲ್ಲಿ ಒಂದೇ ಸಮಯದಲ್ಲಿ

ಎಷ್ಟೋ ಸುಖಗಳನ್ನು ಅನುಭವಿಸುವವರನ್ನು, ಹಾಗೆ ಎಷ್ಟೋ ಬಾಧೆಗಳನ್ನು ಅನುಭವಿಸುವವರನ್ನು ಪ್ರತ್ಯಕ್ಷವಾಗಿ ನೋಡುತ್ತಲೇ ಇದ್ದೇವೆ. ಇತರರನ್ನು ನೋಡುವುದಲ್ಲದೆ, ಸ್ವತಃವಾಗಿ ನಾವೇ ಎಷ್ಟೋ ಸಮಯಗಳಲ್ಲಿ ಸ್ವರ್ಗ ಸುಖಗಳನ್ನೂ, ನರಕಯಾತನೆಗಳನ್ನು ಅನುಭವಿಸಿದ್ದೇವೆ. ಸುಖದುಃಖಗಳೆಲ್ಲವೂ ಈ ಭೂಮಿಮೇಲೆಯೇ ಸ್ವರ್ಗ, ನರಕಗಳೆಂಬ ಹೆಸರಿನಿಂದ ನಡೆಯುತ್ತಿವೆ. ಭಗವದ್ಗೀತೆಯಲ್ಲಾಗಲಿ, ಬೈಬಲ್‌ನಲ್ಲಾಗಲಿ, ಖುರ್‌ಆನ್ ಗ್ರಂಥದಲ್ಲಾಗಲಿ ಸ್ವರ್ಗಲೋಕ, ನರಕ ಲೋಕವೆಂದು ಬರೆದಿರುವುದು ವಾಸ್ತವವೇ ಆದರೂ ಸ್ವರ್ಗ ನರಕ ಲೋಕಗಳು ಎಲ್ಲಿಯೋ ಇದ್ದಂತೆ ಅಂದುಕೊಳ್ಳಬಾರದು. ಈ ನನ್ನ ಮಾತು ರುಚಿ ಇಲ್ಲದಿರುವುದಾಗಿ ಕೆಲವರಿಗೆ ಕಾಣಿಸಿದರೂ, ಬಹಳಜನರಿಗೆ ಕಹಿಯಾಗಿ ಮತ್ತು ಕಠಿಣವಾಗಿ ಕಾಣಿಸಬಹುದು. ಜ್ವರ ಬಂದವರಿಗೆ ನಾಲಿಗೆ ರುಚಿಯನ್ನು ಗ್ರಹಿಸಲಾರದ ಸ್ಥಿತಿಯಲ್ಲಿದ್ದು ಸಿಹಿ ಪದಾರ್ಥವೂ ಸಹ ಕಹಿ ಯಾಗಿರುವಂತೆ ಕಾಣಿಸುತ್ತದೆ. ಪದಾರ್ಥ ಸಿಹಿಯಾದುದೆಂಬುವ ಮಾತು ವಾಸ್ತವವೇ ಆದರೂ ಅವನಿಗಿರುವ ರೋಗದಿಂದ ಕಹಿಯಾಗಿ ತಿಳಿದಿರಬಹುದು. ಅಷ್ಟುಮಾತ್ರಕ್ಕೆ ಸಿಹಿಯನ್ನು ಕಹಿ ಎನ್ನುವುದು ಅಸತ್ಯವಾಗುತ್ತದಲ್ಲವೆ!

ಆಲೋಚನೆ ಎಂದರೆ ಆಳವಾಗಿ ನೋಡುವುದು ಎಂದು ಅರ್ಥ. ಇನ್ನೂ ದೀರ್ಘವಾಗಿ ನೋಡುವುದು ಎಂದು ಸಹ ಅರ್ಥ ಇದೆ. "ಆ" ಎಂಬ ದೀರ್ಘವಿರುವ ಅಕ್ಷರಕ್ಕೆ ಆಳವಾಗಿ, ದೀರ್ಘವಾಗಿ ಎಂದು ವಿಶೇಷತೆ ಇದೆ. ಲೋಚನೆ ಎನ್ನುವ ಪದಕ್ಕೆ "ಆ" ಎನ್ನುವ ಅಕ್ಷರ ವಿಶೇಷವಾಗಿರುವಂತೆ ಹೇಳುತ್ತಿದ್ದೇವೆ. ಲೋಚನೆ ಅಂದರೆ ಕಾಣಿಸುವುದು ಇಲ್ಲವೆ ನೋಡಲ್ಪಡುವುದು ಎಂದು ಅರ್ಥ. ಲೋಚನೆಗಳು ಎಂದರೆ ಕನ್ನಡಕ ಎಂದು ಸಹ ಎನ್ನುತ್ತೇವೆ. ಚೆನ್ನಾಗಿ ಕಾಣಿಸುವಂತೆ ಮಾಡುವ ಕನ್ನಡಕಗಳನ್ನು ಸುಲೋಚನಗಳು ಎನ್ನುತ್ತೇವೆ. ಮುಖ್ಯವಾಗಿ ಈಗ ನಾವು ಹೇಳುವುದು ಏನೆಂದರೆ! ಲೋಚನೆ ಎನ್ನುವ ಪದದಿಂದ ಹುಟ್ಟಿದ ಶಬ್ದ ಲೋಕ. ಲೋಕ ಎಂದರೆ ಕಣ್ಣಿಗೆ ಚೆನ್ನಾಗಿ ಕಾಣಿಸುವುದು ಎಂದು ಅರ್ಥ. ನಾವು ಯಾವ ಲೋಕವನ್ನು ಕುರಿತು ಹೇಳಿಕೊಂಡರೂ, ಆ

ಲೋಕಗಳೆಲ್ಲವೂ ಕಾಣಿಸುವವೆಂದೇ ಅರ್ಥ. ಈಗ ಅಸಲು ವಿಷಯಕ್ಕೆ ಬರೋಣ. ಸ್ವರ್ಗಲೋಕ ಎಂದರೆ ಅರ್ಥವೇನು ಎಂದಾಗ! ಕಾಣಿಸುವ ಸುಖಗಳೆಂದು ಹೇಳಬಹುದು. ಹಾಗೆಯೇ ನರಕಲೋಕ ಎಂದರೆ ಅರ್ಥವೇನೆಂದರೆ! ಕಾಣಿಸುವ ದುಃಖಗಳೆಂದು ಹೇಳಬಹುದು. ಸ್ವರ್ಗಲೋಕ ಎನ್ನುವ ಹೆಸರಿನಲ್ಲಿ ಕಾಣಿಸುವ ಸುಖವೆಂದು ಅರ್ಥ ಇರುವಾಗ, ಸ್ವರ್ಗಲೋಕ ಎಲ್ಲೋ ನಮಗೆ ಕಾಣಿಸದಂತೆ ಇದೆಯೆಂಬುದು ಶಾಸ್ತ್ರಬದ್ಧವಾ? ಧರ್ಮಬದ್ಧವಾ? ಎಂದು ಪ್ರಶ್ನಿಸುತ್ತಿದ್ದೇನೆ.

ಯಾವಾಗ ಮನುಷ್ಯನ (ಜೀವಿಯ) ಅನುಭವದಲ್ಲಿ ಸುಖ ತಿಳಿಯುತ್ತಿದೆಯೋ, ಆಗ (ಆ ಜೀವಿಯು) ಸ್ವರ್ಗವನ್ನು ಹೊಂದುತ್ತಿದ್ದಂತೆ ಆಗುತ್ತದೆ. ಹಾಗೆಯೇ ಯಾವಾಗ ಮನುಷ್ಯನ ಅನುಭವದಲ್ಲಿ ಶರೀರದಲ್ಲೇ ಜೀವಿಯು ದುಃಖವನ್ನು ಅನುಭವಿಸುತ್ತಿದ್ದಾನೋ, ಆಗ ಆತನು ನರಕವನ್ನು ಹೊಂದುತ್ತಿದ್ದಂತೆ ಆಗುತ್ತದೆ. ಈ ವಿಧವಾಗಿ ಸುಖದುಃಖಗಳೆಂಬ ಸ್ವರ್ಗ ನರಕಗಳು ಮನುಷ್ಯ ಭೂಮಿ ಮೇಲೆಯೇ ಪ್ರತ್ಯಕ್ಷವಾಗಿ ಅನುಭವಿಸಿ ನೋಡುತ್ತಿದ್ದಾನೆ. ಎಷ್ಟೋಜನ ಅನುಭವಿಸುವವರನ್ನು ನೋಡುತ್ತಿದ್ದಾನೆ. ಆದರೂ ಲೋಕವೆಂದರೆ ಅರ್ಥ ತಿಳಿಯದೆ ಸ್ವರ್ಗಲೋಕ ಮೇಲೆ ಎಲ್ಲಿಯೋ ಇದೆಯೆಂದು, ನರಕಲೋಕ ಕೆಳಗೆ ಎಲ್ಲೋ ಇದೆಯೆಂದು ಕಥೆಗಳು ಹೇಳಿಕೊಳ್ಳುವುದು, ಪುರಾಣಗಳು ಬರೆದುಕೊಳ್ಳುವುದು ನಡೆದಿದೆ. ಆತ್ಮವನ್ನು ಅಧ್ಯಯನ ಮಾಡುವುದನ್ನು ಆಧ್ಯಾತ್ಮಿಕ ಎನ್ನುತ್ತೇವೆ. ಯಾರಿಗೂ ಆತ್ಮವೇ ತಿಳಿಯದಿರುವಾಗ ಆಧ್ಯಾತ್ಮಿಕ ಹೇಗೆ ತಿಳಿಯುತ್ತದೆ? ಕೆಲವರಿಗೆ ಅದ್ವೈತ ಗೊತ್ತು, ಮತ್ತೆ ಕೆಲವರಿಗೆ ದ್ವೈತ ಗೊತ್ತು, ಆದರೆ ಯಾರಿಗೂ  ತ್ರೈತ ತಿಳಿದಿಲ್ಲ. ಅದರಲ್ಲಿ ಗುಪ್ತವಾದ ಆತ್ಮ ಒಂದಿದೆ ಎಂದು ಯಾರಿಗೂ ತಿಳಿದಿಲ್ಲ. ಆದ್ದರಿಂದ ಆಧ್ಯಾತ್ಮಿಕ ಎನ್ನುವ ಹೆಸರಿದ್ದರೂ ಅದೇನೊ ಪೂರ್ತಿಯಾಗಿ ತಿಳಿದಿಲ್ಲವೆಂದು ಹೇಳಬಹುದು.

ವಿಚಿತ್ರ ಏನೆಂದರೆ ನಾವು ಆಧ್ಯಾತ್ಮಿಕರೆಂದು ಹೆಸರು ಇಟ್ಟುಕೊಂಡ ಎಷ್ಟೋ ಜನ ಸ್ವಾಮೀಜಿಗಳು, ಗುರುಗಳಾಗಿ ಚಲಾವಣೆ ಆಗುತ್ತಿರುವವರೂ,

ಮನುಷ್ಯ ಮರಣಿಸಿದ ನಂತರ ಮೊದಲು ಸ್ವರ್ಗಕ್ಕೆ ನಂತರ ನರಕಕ್ಕೆ ಹೋಗುತ್ತಾರೆಂದು ಹೇಳುತ್ತಿದ್ದಾರೆ. ಹಾಗೆ ಹೇಳುವವರು ಅಸತ್ಯವನ್ನು ಹೇಳಿದಂತಾಗುತ್ತದೆ. ಅಷ್ಟೇ ಅಲ್ಲದೆ ದೇವರು ಏರ್ಪಡಿಸಿದ ವಿಧಾನಕ್ಕೆ ವಿರುದ್ಧವಾಗಿ ಬೋಧಿಸಿದಂತಾಗುತ್ತದೆ. ಒಬ್ಬ ಸಾಧಾರಣ ಮನುಷ್ಯ ತಾನು ರಸ್ತೆ ಸಾರಿಗೆ ಸಂಸ್ಥೆಗೆ ಅಧಿಕಾರಿ ಅಲ್ಲದಿದ್ದರೂ R.T.O ಎಂದು ಹೇಳಿಕೊಳ್ಳುತ್ತಾ, ರಸ್ತೆ ಮೇಲೆ ಹೋಗುವ ವಾಹನಗಳನ್ನು ನಿಲ್ಲಿಸಿ ಅವರಿಂದ ಅಪರಾಧ ಶುಲ್ಕವನ್ನು ವಸೂಲು ಮಾಡಿದರೆ ಅದು ತಪ್ಪಾಗುತ್ತದೆ. ಕಾನೂನಿಗೆ ವಿರುದ್ಧವಾಗುತ್ತದೆ. ಆತನು ಕಾನೂನಿನ ದೃಷ್ಟಿಯಲ್ಲಿ ಅಪರಾಧಿಯಾಗುತ್ತಾನೆ. ಹಾಗೆಯೇ ಗುರುವು ಪದವಿಯಾಗಲಿ, ಸ್ವಾಮೀಜಿ ಅಧಿಕಾರವಾಗಲಿ ಇಲ್ಲದೆ ಪ್ರಜೆಗಳ ಮುಂದೆ ಸ್ವಾಮೀಜಿಯಾಗಿ, ಗುರುವಾಗಿ ಗುರುತಿಸಲ್ಪಟ್ಟು ಪ್ರಜೆಗಳಿಂದ ಗೌರವವನ್ನು ಹೊಂದಿದರೆ ದೇವರ ಕಾನೂನಿನಲ್ಲಿ ಅದು ವಿರುದ್ಧವಾಗುತ್ತದೆ. ಧರ್ಮದ ದೃಷ್ಟಿಯಲ್ಲಿ ಶಿಕ್ಷಾರ್ಹನಾಗುತ್ತಾನೆ.

ಈ ವಿಷಯವಾಗಿ ಕೆಲವರು ಏನನ್ನುತ್ತಿದ್ದಾರೆಂದರೆ! ನಮಗೆ ಗುರುಗಳಾಗಿ ಇರುವವರು ಹಾಗೆ ಬೋಧಿಸಿದ್ದಾರೆ. ಅವರ ನಂತರ ಗುರುಗಳಾದ ನಾವು ನಮ್ಮ ಗುರುವು ಹೇಳಿದ ಬೋಧನೆಯನ್ನು ಸನಾತನವಾಗಿ ಬೋಧಿಸುತ್ತಿದ್ದೇವೆ. ಒಂದುವೇಳೆ ತಪ್ಪು ಆದರೆ ಅದು ನಮ್ಮ ಗುರುವುವಿನದಲ್ಲವೆ! ನಮ್ಮದು ಹೇಗೆ ತಪ್ಪಾಗುತ್ತದೆ ಎಂದು ಕೇಳುತ್ತಿದ್ದಾರೆ. ಅಷ್ಟೇ ಅಲ್ಲದೆ ಗುರುವು ಹೇಳಿರುವುದನ್ನು ಬೋಧಿಸುವುದೇ ನಮ್ಮ ಸನಾತನ ಧರ್ಮ ಎನ್ನುತ್ತಿದ್ದಾರೆ. ಅಂತಹವರಿಗೆ ಗುರುವು ಎಂದರೆ ಅರ್ಥ ತಿಳಿದಿಲ್ಲ, ಧರ್ಮ ಎಂದರೆ ಏನೋ ಅರ್ಥ ತಿಳಿದಿಲ್ಲ. ಸನಾತನ ಎಂದರೆ ಸಹ ವಿವರ ತಿಳಿಯದು. ಆದರೂ ಎಲ್ಲಾ ಪದಗಳು ಬಳಸುತ್ತಿದ್ದಾರೆ. ದೇವರು ಯಾರೋ, ಭಗವಂತನು ಯಾರೋ ತಿಳಿಯದು. ದೇವರೆಂದರೂ ಭಗವಂತನೆಂದರೂ ಎರಡೂ ಒಂದೇ ಎನ್ನುವ ಹಿಂದುಗಳು ಇರುವುದರಿಂದ ಪ್ರಪಂಚ ಪ್ರಖ್ಯಾತಿಯಾದ ಇಂದೂ (ಹಿಂದೂ) ಧರ್ಮ ಈ ದಿನ ಕ್ಷೀಣಿಸಿಹೋಗಿ, ಅದು ಎಲ್ಲಿದೆಯೋ ಸಹ ತಿಳಿಯದ ಆಗಾಧಕ್ಕೆ

ಹೊರಟುಹೋಗಿದೆ. ಇಂದೂ ಧರ್ಮರಕ್ಷಣ ಹೆಸರಿನಿಂದ ಎಷ್ಟೋಜನ ಇದ್ದರೂ ಅವರೂ ಸಹ ಅಶಾಸ್ತ್ರೀಯವಾಗಿ ಬೋಧಿಸುತ್ತಾ, ಪುರಾಣ ಕಥೆಗಳನ್ನು ಹೇಳುವುದರಿಂದ ಇಂದೂಗಳಿಗೆ ತಮ್ಮ ಧರ್ಮ ಯಾವುದೋ, ತಮ್ಮ ದೇವರು ಯಾರೋ ತಿಳಿಯದೆ ಅಯೋಮಯ ಸ್ಥಿತಿಯಲ್ಲಿದ್ದು ಇತರ ಮತಬೋಧನೆಗಳ ಕಡೆ ನೋಡುತ್ತಿದ್ದಾರೆ. ಸ್ವಲ್ಪಜನ ನೇರವಾಗಿ ಮತವನ್ನೇ ಬದಲಾಯಿಸಿ ಕೊಳ್ಳುತ್ತಿದ್ದಾರೆ.

ಐದುಸಾವಿರ ವರ್ಷಗಳ ಪೂರ್ವವೇ, ಭಗವದ್ಗೀತೆ ಕೃಷ್ಣನಿಂದ ಹೇಳಲ್ಪಡದೆಯೇ, ಭಾರತ ದೇಶವೆಲ್ಲಾ ವೇದಗಳು, ಪುರಾಣಗಳು ಚೆನ್ನಾಗಿ ಪ್ರಚಾರವಾಗಿದ್ದವು. ವೇದಗಳ ಕೊನೆಯ ಭಾಗವಾದ ಉಪನಿಷತ್ತುಗಳಲ್ಲಿ ಎಲ್ಲಿಯೋ ಸುದೂರದಲ್ಲಿ ಯಮಲೋಕ ಇದೆಯೆಂದು, ಅಲ್ಲಿಗೆ ಹೋಗಿ ಬಂದವರು ಇದ್ದಾರೆಂದು ಬರೆಯುವುದು ನಡೆದಿದೆ. ಹಾಗೆಯೇ ಪುರಾಣಗಳಲ್ಲಿ ಸತಿಸಾವಿತ್ರಿ ತನ್ನ ಪತಿಯ ಪ್ರಾಣಗಳನ್ನು ಯಮಧರ್ಮರಾಜನ ಹತ್ತಿರ ವಾದಿಸಿ ಹಿಂದಕ್ಕೆ ತಂದುಕೊಂಡು ಸಜೀವನನ್ನಾಗಿ ಮಾಡಿಕೊಂಡಿದ್ದಾ ಳೆಂದು ಬರೆಯಲಾಗಿದೆ. ಇನ್ನೂ ಕೆಲವರು ತಾವು ನೋಡಿಬಂದವರಂತೆ ಯಮಲೋಕಕ್ಕೆ ಹೋಗುವುದಕ್ಕೆ ವೈತರಣಿ ನದಿ ದಾಟಿ ಹೋಗಬೇಕೆಂದು, ಆ ನದಿ ಎಲ್ಲವೂ ದುರ್ವಾಸನೆಯಿಂದ ಕೂಡಿಕೊಂಡು ರಕ್ತಮಾಂಸಗಳ ಪ್ರವಾಹವಾಗಿ ಇದೆಯೆಂದು ಬರೆದಿದ್ದಾರೆ. ಗರುಡ ಪುರಾಣವನ್ನು ಪ್ರತ್ಯೇಕಿಸಿ ಯಮಲೋಕವನ್ನು ಕುರಿತು ಹೇಳುವುದಕ್ಕೆ ಬರೆದಿದ್ದಾರೆ. ಇಂತಹ ಕೆಲಸ ಮಾಡಿದವನಿಗೆ ಇಂತಹ ಪಾಪ ಬರುತ್ತದೆಂದು, ಇಂತಹ ಪಾಪ ಬಂದವರಿಗೆ ಯಮಲೋಕದಲ್ಲಿ ಇಂತಹ ಶಿಕ್ಷೆ ಇರುತ್ತದೆಂದು ಬರೆಯುವುದು ನಡೆದಿದೆ. ಯಮಲೋಕದಲ್ಲಿ ಪಾಪಗಳನ್ನು ಕುರಿತು ಚಿತ್ರಗುಪ್ತನು ಒಂದು ಗ್ರಂಥವನ್ನು ಬರೆಯುತ್ತಿದ್ದಾನೆಂದು, ಅದರಲ್ಲಿ ಎಲ್ಲಾರ ಪಾಪಗಳಿವೆ ಎಂದು, ಮನುಷ್ಯ ಮರಣಿಸಿ ಯಮಲೋಕಕ್ಕೆ ಹೋದಾಗ ಅವನು ಜೀವನದಲ್ಲಿ ಮಾಡಿಕೊಂಡ ಪಾಪಗಳ ಪಟ್ಟಿಯನ್ನು ಚಿತ್ರಗುಪ್ತನು ಬಿಚ್ಚಿ ಹೇಳಿದಾಗ, ಅವುಗಳನ್ನು ಕೇಳಿದ ಯಮಧರ್ಮರಾಜ ಅವನ ಪಾಪಗಳಿಗೆ

ತಕ್ಕ ಶಿಕ್ಷೆಯನ್ನು ಹಾಕುವನೆಂದು ಹೇಳುವುದು ನಡೆದಿದೆ. ಅಷ್ಟೇ ಅಲ್ಲದೆ ಯಮಧರ್ಮರಾಜ ವಿಧಿಸಿದ ಶಿಕ್ಷೆಗಳನ್ನು ಜಾರಿ ಮಾಡುವುದಕ್ಕೆ ಲೆಕ್ಕವಿಲ್ಲದಷ್ಟುಜನ ಯಮಕಿಂಕರರಿದ್ದಾರೆಂದು, ಅವರು ದಯಾ ದಾಕ್ಷಿಣ್ಯ ಇಲ್ಲದಂತೆ ಶಿಕ್ಷೆಗಳು ಜಾರಿ ಮಾಡುತ್ತಾರೆಂದು, ಯಮಲೋಕವೆಲ್ಲವೂ ಮನುಷ್ಯರ ಆರ್ತನಾದಗಳಿಂದ ತುಂಬಿರುತ್ತದೆ ಎಂದು ಹೇಳುವುದು ನಡೆದಿದೆ. ಗರುಡ ಪುರಾಣದಲ್ಲಿ ನರಕ ಪ್ರತ್ಯಕ್ಷವಾಗಿ ಕಾಣಿಸುವಂತೆ ಬರೆಯುವುದೆ ಅಲ್ಲದೆ, ಯಮಕಿಂಕರರು ಪಾಪಿಗಳನ್ನು ಎಣ್ಣೆಯಲ್ಲಿ ಹಾಕಿಸುಡುತ್ತಾರೆಂದು, ಅಗ್ನಿಯಲ್ಲಿ ಹಾಕಿ ಸುಡುತ್ತಾರೆಂದು, ಶೂಲಗಳಿಂದ ಇರಿಯುತ್ತಾರೆಂದು, ದೊಡ್ಡ ಕಲ್ಲುಬಂಡೆಯನ್ನು ಮೈಮೇಲೆ ತಳ್ಳಿ ಮನುಷ್ಯರನ್ನು ನಲುಗಿ ಹೋಗುವಂತೆ ಮಾಡುತ್ತಾರೆಂದು ಅನೇಕ ಹಿಂಸೆಗಳನ್ನು ಬರೆದಿದ್ದಾರೆ. ಪಾಪಗಳು ಮುಗಿದುಹೋಗುವವರೆಗು ಮನುಷ್ಯನನ್ನು ಯಮಕಿಂಕರರು ಬಾಧಿಸಿ ಬಿಡುವುದರಿಂದ, ಅಲ್ಲಿಂದ ಮನುಷ್ಯ ತನ್ನ ಪುಣ್ಯವನ್ನು ಅನುಭವಿಸುವುದಕ್ಕೆ ಸ್ವರ್ಗಲೋಕಕ್ಕೆ ಹೋಗಿ ಪುಣ್ಯ ಮುಗಿದುಹೋಗುವವರೆಗೂ ಸ್ವರ್ಗಲೋಕದಲ್ಲಿ ರಂಭೆ ಊರ್ವಶಿಯರ ಮಧ್ಯೆ ಎಷ್ಟೋ ಸುಖಗಳನ್ನು ಅನುಭವಿಸಿ, ನಂತರ ತ್ರಿಮೂರ್ತಿಗಳಲ್ಲಿ ಒಬ್ಬರಾದ ಬ್ರಹ್ಮನ ಹತ್ತಿರಕ್ಕೆ ಹೋಗಿ ಹೊಸದಾಗಿ ಹಣೆಬರಹವನ್ನು ಬರೆಸಿಕೊಂಡು ಪುನಃ ಭೂಮಿ ಮೇಲಕ್ಕೆ ಬಂದು ಹುಟ್ಟುತ್ತಾನೆಂದು ಬರೆದಿದ್ದಾರೆ.

ಹೀಗೆ ಹೇಳುತ್ತಾ ಹೋದರೆ ಅದೇ ಒಂದು ಗ್ರಂಥವಾಗುತ್ತದೆ. ನಾಲ್ಕು ವೇದಗಳನ್ನು, ಹದಿನೆಂಟು ಪುರಾಣಗಳನ್ನು ವ್ಯಾಸನು ದ್ವಾಪರಯುಗದಲ್ಲಿ ಬರೆದಿದ್ದಾನೆ. ವೇದಗಳನ್ನು ಬರೆಯುವುದರಿಂದ ಆತನನ್ನು ವೇದವ್ಯಾಸನು ಅಂದಿದ್ದಾರೆ. ಎಷ್ಟೋಜನ ಮಹರ್ಷಿಗಳು ಬೋಧನೆಗಳಾಗಿ ಹೇಳಿದ ವಿಷಯ ಗಳನ್ನು ಶೇಖರಿಸಿ ಅವುಗಳನ್ನು ಉಪನಿಷತ್ತುಗಳಾಗಿ ವೇದಗಳ ಕೊನೆಯ ಭಾಗದಲ್ಲಿ ಬರೆಯುವುದು ನಡೆದಿದೆ. ಯಾರಾದರೆ ಉಪನಿಷತ್‌ನ್ನು ಹೇಳಿದ್ದಾರೋ ಅವರ ಹೆಸರನ್ನೇ ಆ ಉಪನಿಷತ್‌ಗೆ ಇಡುವುದು ನಡೆದಿದೆ. ಉದಾಹರಣೆಗೆ ತ್ರೈತ್ತರೀಮಹರ್ಷಿ ಹೇಳಿದ ಬೋಧನೆಯನ್ನು ವ್ಯಾಸನು ಉಪನಿಷತ್ತಾಗಿ

ಬರೆಯುತ್ತಾ ಆ ಉಪನಿಷತ್ತಿಗೆ ಅದನ್ನು ಹೇಳಿದ ತ್ರೈತ್ತರೀಮಹರ್ಷಿ ಹೆಸರನ್ನು ಇಡುತ್ತಾ ತ್ರೈತ್ತರೀಯೋಪನಿಷತ್ತು ಎಂದು ಹೆಸರು ಇಡುವುದು ನಡೆದಿದೆ. ಈ ವಿಧವಾಗಿ ಎಲ್ಲಾ ಉಪನಿಷತ್ತಗಳಿಗೂ ಅವುಗಳನ್ನು ಹೇಳಿದವರ ಹೆಸರುಗಳನ್ನೇ ವ್ಯಾಸನು ಇಟ್ಟಿದ್ದಾನೆ. ವೇದಗಳನ್ನು ಸ್ವತಃ ವ್ಯಾಸನೇ ಬರೆದಿದ್ದಾನೆ. ನಾಲ್ಕು ವೇದಗಳನ್ನೇ ಅಲ್ಲದೆ ಹದಿನೆಂಟು ಪುರಾಣಗಳನ್ನು ಸಹ ಬರೆದಿದ್ದಾನೆ. ತನಗೆ ಒಳ್ಳೆಯ ಕೆಲಸವಾಗಿ ತಿಳಿದು ವ್ಯಾಸನು ಬರೆದ ಬರಹಗಳಿಂದ ಸತ್ಯ ಮರೆಯಲ್ಲಿ ಬಿದ್ದುಹೋಗಿ ಅಸತ್ಯ ಹೊರಗೆ ಬಂದಿದೆ. ವ್ಯಾಸನು ಬರೆದ ಬರಹಗಳಿಂದ ಧರ್ಮವು ಮರೆಯಲ್ಲಿ ಉಳಿದುಹೋಗಿ ಅಧರ್ಮ ಬಹಿರ್ಗತವಾಗಿದೆ. ಆಗಿನ ಕಾಲದಲ್ಲಿ ವ್ಯಾಸನು ಮಾತ್ರವೇ ಹೆಸರು ಹೊಂದಿದ ರಚಿತನಾಗಿ ಇರುವುದರಿಂದ, ಎಲ್ಲರೂ ಅವುಗಳನ್ನು ಓದುವುದು, ಅಧರ್ಮಪರರಾಗಿ ಬದಲಾಗುವುದು ನಡೆದಿದೆ. ಇದೆಲ್ಲ ವಾಸ್ತವವಾಗಿ ನಡೆದ ಸತ್ಯವೇ ಆದರೂ, ಇದರಲ್ಲಿ ಕಾಣಿಸದ ಸತ್ಯವೊಂದಿದೆ. ಅದೇ ಎಲ್ಲರಿಗೂ ಮುಖ್ಯವಾದ ರಹಸ್ಯ.

ಹೊರಗೆ ಕಾಣಿಸದ ರಹಸ್ಯವಾದ ಸತ್ಯ ಏನೆಂದರೆ! ವ್ಯಾಸನು ಅಸತ್ಯವನ್ನೂ, ಅಧರ್ಮವನ್ನೇ ತನ್ನ ಬರಹದಲ್ಲಿ ಬರೆದರೂ, ವಾಸ್ತವವಾಗಿ ಬರೆದವನು ವ್ಯಾಸನು ಮಾತ್ರ ಅಲ್ಲ. ಈ ಮಾತು ಸ್ವಲ್ಪ ಆಶ್ಚರ್ಯವನ್ನು ಉಂಟುಮಾಡಿದರು ವ್ಯಾಸನು ನಮಗೆ ಕಾಣಿಸುವ ವ್ಯಕ್ತಿಯಾಗಿದ್ದರೂ, ವ್ಯಾಸನು ತನ್ನ ಶರೀರದಲ್ಲಿ ಕೇವಲ ಜೀವಾತ್ಮನಾಗಿದ್ದಾನೆ. ಶರೀರದಲ್ಲಿನ ಜೀವಿಯು ಯಾರಾದರೂ ಸುಖದುಃಖಗಳನ್ನು ಅನುಭವಿಸುವುದಕ್ಕೆ ಇದ್ದಾನಾಗಲಿ, ಕೆಲಸವನ್ನು ಮಾಡುವುದಕ್ಕೆ ಅಲ್ಲ. ಜೀವಿಯು ಎಲ್ಲಾ ವಿಧದಲ್ಲು ಕುರುಡನು, ತನ್ನವರೆಗೂ ಬಂದಿರುವುದನ್ನು ಅನುಭವಿಸುವುದು ಹೊರತು ಯಾವ ಕೆಲಸವನ್ನು ಮಾಡದ ಅಂಗಹೀನನು. ಎಲ್ಲಾ ಅಂಗಗಳು ಶರೀರಕ್ಕೆ ಇವೆಯಾಗಲಿ ತನಗೆ ಇಲ್ಲ. ಶರೀರ ಎಲ್ಲವೂ ಆತ್ಮದು ಜೀವಿದು ಅಲ್ಲ. ಜೀವಾತ್ಮ ಶರೀರದಲ್ಲಿ ಒಂದು ಭಾಗವೇ ಆಗಲಿ, ಸ್ವತಃವಾಗಿ ಏನನ್ನು ಮಾಡುವುದಿಲ್ಲ, ಜೀವಿಗೆ ಕಾರ್ಯಗಳು ಮಾಡುವ ಶಕ್ತಿಯು ಇಲ್ಲ. ಶರೀರದಲ್ಲಿ ನಡೆಯುವ ಪ್ರತಿ ಸಣ್ಣ ಕಾರ್ಯ

ಎರಡನೆಯವನೂ, ಚಿತ್ರಗುಪ್ತನಾದ ಆತ್ಮನಿಂದಲೇ ನಡೆಯುತ್ತಿದೆ. ಅಂತಹದರಲ್ಲಿ ಎಷ್ಟು ದೊಡ್ಡ ಕಾರ್ಯವಾದರು ವೇದಗಳ, ಪುರಾಣಗಳ ರಚನೆಗಳನ್ನು ಮಾಡಿರುವುದು ಆತ್ಮವೇ.

ಮೇಲೆ ಕಾಣಿಸುವುದು ವ್ಯಾಸನಿರುವ ಶರೀರವೇ ಆದರೂ, ಒಳಗೆ ಮಾಡುವುದು ವಾಸ್ತವಕ್ಕೆ ವ್ಯಾಸನಲ್ಲ. ಸ್ವರ್ಗ ನರಕಗಳ ಬಗ್ಗೆ ಅಸತ್ಯವನ್ನು ಆಧ್ಯಾತ್ಮಿಕವನ್ನು ಕುರಿತಾದ ಅಧರ್ಮವನ್ನು ಸ್ವತಃ ಅತ್ಮವೇ ಏಕೆ ಬರೆದಿದೆ. ಆಧ್ಯಾತ್ಮಿಕವೆಲ್ಲವೂ ಆತ್ಮವನ್ನು ಕುರಿತು ತಿಳಿದುಕೊಳ್ಳುವುದಕ್ಕೋಸ್ಕರ ಇರುವುದೆ ಅಲ್ಲವೆ! ಅಂತಹದರಲ್ಲಿ ತನ್ನ ವಿಷಯವನ್ನೇ ತಾನು ಏಕೆ ಪಕ್ಕದಾರಿ ಹಿಡಿಸಿ ಹೇಳಿದೆಯೆಂಬ ಪ್ರಶ್ನೆ ಬರುತ್ತದೆ. ದೇವರ ಮಾರ್ಗದಲ್ಲಿ ಇದು ದೊಡ್ಡ ತಪ್ಪಾದರೂ, ತಪ್ಪೆಂದು ಆತ್ಮಕ್ಕೆ ತಿಳಿದರೂ, ಆತ್ಮ ಹಾಗೆ ಮಾಡಿದೆ ಅಂದರೆ ಅದಕ್ಕೆ ಬಲವಾದ ಕಾರಣ ಇರುತ್ತದೆ. ಆ ಕಾರಣದ ಬಗ್ಗೆ ಹೇಳುವುದು ಈಗ ಸಮಯವಲ್ಲ. ಸಂದರ್ಭ ಬಂದರೆ ತಪ್ಪದೆ ವಿವರಿಸುತ್ತೇವೆ. ಮನುಷ್ಯರೆಲ್ಲರಿಗೂ ಆತ್ಮ ಮತ್ತೊಂದು ಇದೆಯೆಂದು, ಶರೀರವು ಅದರದ್ದೇ ಎಂದು, ಅದರಜೊತೆ ಶರೀರದಲ್ಲಿ ನಾನಿದ್ದೇನೆಂದು ಯಾವ ಮಾತ್ರ ತಿಳಿದಿಲ್ಲ. ತಿಳಿದಿರುವುದೆಲ್ಲ ಶರೀರವೇ ನಾನೂ, ನಾನೇ ಶರೀರ ಎನ್ನುವುದು ಮಾತ್ರವೆ. ಶರೀರದಿಂದ ನಡೆಯುವ ಕೆಲಸವೆಲ್ಲಾ ನಾನು ಮಾಡಿದ್ದೇನೆಂಬ ಭಾವನೆ ಹೊರತು ಏನೂ ಇರುವುದಿಲ್ಲ. ಈಗ ಈ ಗ್ರಂಥವನ್ನು ಬರೆಯುತ್ತಿರುವುದು ನಾನೇ ಎಂದು, ಜೀವಿಯಾದ ನಾನು ಅಂದುಕೊಳ್ಳುವುದಕ್ಕೆ ಯಾವ ಅಡಚಣೆಯೂ ಇಲ್ಲ. ಆದರೂ ನಾನು ಯಾರೋ ನನಗೆ ತಿಳಿದಿದೆ. ಈ ಗ್ರಂಥವನ್ನು ನಾನು ಬರೆದಂತೆ ಗ್ರಂಥ ರಚಯಿತ ಎಂದು ನನ್ನ ಹೆಸರಿದ್ದರೂ, ಆ ವಿಧವಾಗಿ ಮೇಲೆ ನೋಡುವುದಕ್ಕೆ ನನ್ನ ಹೆಸರಿಟ್ಟು ಬರೆದಿರುವುದು ಸ್ವತಃ ಆತ್ಮವೆಂದು ತಿಳಿದಿದೆ. ಆದರೂ ಯಾವ ಕೆಲಸವನ್ನು ಖಂಡಿಸಲಾರೆನು ಹಾಗೆ ಮಾಡಲಾರೆನು. ಆದ್ದರಿಂದ ಬಹಳ ಗ್ರಂಥಗಳಲ್ಲಿ ಮೊದಲೇ 'ಇದನ್ನು ಬರೆದಿರುವುದು ನಾನು ಅಲ್ಲ, ನನ್ನ ಪಕ್ಕದವನಾದ ಆತ್ಮವೆಂದು' ಹೇಳಿದ್ದೇನೆ. ಹಾಗೆ ಹೇಳುವುದು ಸಹ ನನ್ನ ಕೈಲಾಗುವುದಿಲ್ಲ,

ಆದರೆ ನಾನು ಅಲ್ಲ ಎಂಬ ನನ್ನ ಭಾವವನ್ನು ಆತ್ಮವೇ ಶರೀರದಿಂದ ಬರೆಸಿದೆ. ನೋಡಿದ್ದೀರಾ! ಇಷ್ಟು ತಿಳಿದರೂ ನಾನು ಎಂದಿಗೂ ಏನು ಮಾಡದವನೇ. ಆದರೆ ನಿಮಗೆ ಅರ್ಥವಾಗುವಂತೆ ಪ್ರಬೋಧಾನಂದನ ಹೆಸರಿನಿಂದಲೇ ಬರೆಯುವುದು ನಡೆದಿದೆ ಎಂದು ತಿಳಿದುಕೊಳ್ಳಿ.

ಇದು ತೀರ್ಪಿಗೆ ಸಂಬಂಧಿಸಿದ ಗ್ರಂಥ. ತೀರ್ಪು ಎಂದರೆ ತಪ್ಪು ಒಪ್ಪುಗಳನ್ನು ತೀರ್ಮಾನಿಸಿ ಶಿಕ್ಷೆಯನ್ನಾಗಲಿ, ಅಕ್ಷಯನ್ನಾಗಲಿ ಜಾರಿ ಮಾಡುವುದಕ್ಕೆ ನ್ಯಾಯಮೂರ್ತಿಯಿಂದ ನಿರ್ಣಯಿಸಲ್ಪಡುವುದು. ಹೊರಗಿನ ಕೋರ್ಟು ಗಳಲ್ಲಿಯೇ ತೀರ್ಪುಗಳು ಶಿಕ್ಷೆಗಳು ಇರುತ್ತವೆ. ಪ್ರತಿ ಮನುಷ್ಯನಿಗೂ ಒಳಗೆ ಕಾಣಿಸಿದ ನ್ಯಾಯಸ್ಥಾನ (ಕೋರ್ಟ್), ಕಾಣಿಸದ ನ್ಯಾಯವಾದಿ, ಕಾಣಿಸದ ನ್ಯಾಯಮೂರ್ತಿ ಇದ್ದಾರೆ. ಯಾರಿಗೂ ತಿಳಿಯದ ಅಂತರಂಗದಲ್ಲಿನ ಕೋರ್ಟಿನಲ್ಲಿ ವಿಚಾರಣೆ ಹೇಗೆ ಇರುತ್ತದೋ, ತೀರ್ಪು ಹೇಗೆ ಇರುತ್ತದೋ ಎಲ್ಲರಿಗೂ ಅರ್ಥವಾಗುವಂತೆ ವಿವರಿಸಬೇಕೆಂದುಕೊಂಡಿದ್ದೇವೆ. ಕಾಣಿಸದ ನ್ಯಾಯಸ್ಥಾನವನ್ನು ವಿವರಿಸುವುದಕ್ಕೆ ಅಪರಾಧಿಗಳು ಹೇಗೆ ಇರುತ್ತಾರೋ, ಯಾರು ಅಪರಾಧಿಗಳಾಗುತ್ತಾರೋ ಸ್ವಲ್ಪ ಹೇಳಿಕೊಳ್ಳಬೇಕಾಗಿದೆ. ಪ್ರಪಂಚ ಸಂಬಂಧ ತೀರ್ಪುಗಳ ಬಗ್ಗೆ, ಪ್ರಪಂಚ ಸಂಬಂಧ ಅಪರಾಧಿಗಳನ್ನು ಕುರಿತು ನಾವು ಹೇಳಿಕೊಳ್ಳಬೇಕಾದ ಅವಶ್ಯಕತೆ ಇಲ್ಲ. ಪ್ರಪಂಚ ಸಂಬಂಧ ಹತ್ಯೆಗಳಾಗಲಿ, ಕಳ್ಳತನವಾಗಲಿ, ವ್ಯಭಿಚಾರವಾಗಲಿ, ಅಸತ್ಯಗಳಾಗಲಿ, ದೌರ್ಜನ್ಯಗಳಾಗಲಿ, ಹಿಂಸಿಸುವುದಾಗಲಿ, ಮೋಸವಾಗಲಿ ಮೊದಲಾದ ಎಲ್ಲಾ ಕಾರ್ಯಗಳಿಗೂ ಸಂಭವಿಸುವ ಪಾಪಗಳೆಲ್ಲವನ್ನು ಆತ್ಮ ಆಗಾಮಿ ಕರ್ಮವಾಗಿ ಬರೆದಿಡುತ್ತಿರುತ್ತದೆ. ನಂತರ ಕಾಲದಲ್ಲಿ ಆಗಾಮಿಕರ್ಮ ಪ್ರಾರಬ್ಧಕರ್ಮವಾಗಿ ಶಿಕ್ಷೆಯಾಗಿ ಪರಿಗಣಿ ಸಲ್ಪಡುತ್ತದೆ. ಅವುಗಳ ವಿವರವನ್ನು ನಾವು ಈಗ ಹೇಳಬೇಕೆಂದುಕೊಳ್ಳಲಿಲ್ಲ. ಈಗ ನಾವು ಹೇಳುವುದು ಪ್ರಪಂಚ ಸಂಬಂಧ ಅಲ್ಲದೆ ಪರಮಾತ್ಮ ಸಂಬಂಧವಾದ ವಿಷಯಗಳನ್ನು ಮಾತ್ರವೇ ಎಂದು ತಿಳಿಸುತ್ತಿದ್ದೇವೆ. ಪ್ರಪಂಚ ಸಂಬಂಧವಾದ ವಿಷಯಗಳು ಪಾಪಪುಣ್ಯಗಳಾಗಿ ಚಿತ್ರಗುಪ್ತನಾದ ಆತ್ಮನಿಂದ ಬರೆಯಲ್ಪಟ್ಟು

ಶಿಕ್ಷೆ ಅಕ್ಷಗಳಾಗಿ ಜಾರಿಯಾಗುತ್ತಿವೆ. ಪರಮಾತ್ಮ ಸಂಬಂಧ ದೈವ ವಿಷಯಗಳು ಜ್ಞಾನ ಅಜ್ಞಾನಗಳಾಗಿ ಪ್ರಕೃತಿಯಿಂದ ಗುರುತಿಸಲ್ಪಟ್ಟಿದ್ದು ಅಥವಾ ಬರೆಯಲ್ಪಟ್ಟು ಜನ್ಮ ಮೋಕ್ಷಗಳಾಗಿ ಪ್ರಕೃತಿಯಿಂದಲೇ ಜಾರಿ ಆಗುತ್ತಿವೆ.

ಪ್ರಪಂಚ ಸಂಬಂಧ ಕಾರ್ಯಗಳಲ್ಲಿ ಒಳ್ಳೆಯ ಕೆಲಸಗಳಿಗೆ ಪುಣ್ಯವೂ, ಕೆಟ್ಟ ಕೆಲಸಗಳಿಗೆ ಪಾಪವೂ ಬರುತ್ತಿರುತ್ತದೆ. ಯಾವುವು ಒಳ್ಳೆಯ ಕಾರ್ಯಗಳು? ಯಾವುವು ಕೆಟ್ಟ ಕಾರ್ಯಗಳು ಎಂದು ತಿಳಿಯುವುದು ನ್ಯಾಯ ಅನ್ಯಾಯಗಳನ್ನು ಅನುಸರಿಸಿ ಇರುತ್ತದೆ. ನಡೆದ ಕೆಲಸ ನ್ಯಾಯ ಸಮ್ಮತವಾದರೆ ಒಳ್ಳೆಯ ಕೆಲಸವೆಂದು, ಅನ್ಯಾಯವಾದುದಾದರೆ ಆ ಕೆಲಸ ಕೆಟ್ಟದೆಂದು ಹೇಳಬಹುದು. ಪ್ರಪಂಚ ಕಾರ್ಯಗಳು ನ್ಯಾಯ ಅನ್ಯಾಯಗಳ ಮೇಲೆ ಆಧಾರಪಟ್ಟಿರುವಂತೆ, ದೈವ ಸಂಬಂಧ ಕಾರ್ಯಗಳು ಯಾವಾದರೂ ಜ್ಞಾನ ಅಜ್ಞಾನದ ಮೇಲೆ ಆಧಾರಪಟ್ಟಿರುತ್ತವೆ. ಪ್ರಪಂಚ ವಿಷಯಗಳಲ್ಲಿ ಯಾವುದು ನ್ಯಾಯವೋ, ಯಾವುದು ಅನ್ಯಾಯವೋ ಸರಿಯಾಗಿ ನಿರ್ಣಯಿಸುವುದಕ್ಕೆ ಕಾನೂನು ಅನ್ನುವುದು ಇದೆ. ಕಾನೂನು ಇಲ್ಲದಿದ್ದರೆ ಯಾರ ಕೆಲಸ ಅವನಿಗೆ ನ್ಯಾಯವಾಗಿಯೇ ಕಾಣಿಸುತ್ತದೆ. ಹಾಗೆ ಅಲ್ಲದೆ ಯಾವುದು ನ್ಯಾಯವೋ ತೀರ್ಮಾನಿಸಿ ಹೇಳುವುದಕ್ಕೆ ಕಾನೂನು ಎನ್ನುವುದು ಎಲ್ಲೆಯಂತೆ ಇದೆ. ಹಾಗೆಯೇ ದೈವಮಾರ್ಗದಲ್ಲಿ ಜ್ಞಾನವನ್ನನುಸರಿಸಿ ಯಾರ ಸಾಧನೆ, ಬೋಧನೆ ಸರಿಯಾದುದೋ, ಯಾರ ಬೋಧನೆಗಳಾಗಲಿ, ಸಾಧನೆಗಳಾಗಲಿ ಸರಿಯಲ್ಲವೋ ಖಂಡಿತವಾಗಿ ನಿರ್ಣಯಿಸಿ ಹೇಳುವುದು ಧರ್ಮ. ಹೊರಗಿನ ಪ್ರಪಂಚದಲ್ಲಿ ನ್ಯಾಯವನ್ನು ನಿರ್ಣಯಿಸುವುದಕ್ಕೆ ಕಾನೂನು ಇರುವಂತೆ, ಅಂತರಂಗದಲ್ಲಿ ಜ್ಞಾನವನ್ನು ನಿರ್ಣಯಿಸುವುಕ್ಕೆ ಧರ್ಮವಿದೆ.

ದೈವಮಾರ್ಗದಲ್ಲಿ ಅಜ್ಞಾನವಾಗಿ ಪ್ರವರ್ತಿಸಿದರೆ ಇದು ಧರ್ಮವಿರುದ್ಧ ಎಂದು ತಿಳಿಯುವುದಕ್ಕೆ ಮನುಷ್ಯನಿಗೆ ಮೊದಲು ಜ್ಞಾನ, ಧರ್ಮ ತಿಳಿದಿರಬೇಕು. ಯಾವ ಪ್ರಭುತ್ವವಾದರೆ ಕಾನೂನನ್ನು ತಯಾರು ಮಾಡಿದೆಯೋ, ಆ ಪ್ರಭುತ್ವವೇ ತನ್ನ ಕಾನೂನು ಇದು ಎಂದು ತಿಳಿಸಬೇಕು. ಹಾಗೆಯೇ ಯಾವ ದೇವರಾದರೆ ಧರ್ಮವನ್ನು ನಿರ್ಣಯಿಸಿದ್ದಾನೋ, ಆ ದೇವರೇ ತನ್ನ ಧರ್ಮವು ಇದೇ

ಎಂದು ತಿಳಿಸಬೇಕು, ಇತರರು ತಿಳಿಸುವುದಕ್ಕೆ ಸಾಧ್ಯವಿಲ್ಲ. ಪ್ರಭುತ್ವ ಕಾನೂನು ಪ್ರಭುತ್ವಕ್ಕೆ ತಿಳಿದಂತೆ, ದೇವರ ಧರ್ಮ ದೇವರಿಗೇ ತಿಳಿದಿರುತ್ತದೆ. ಪ್ರಭುತ್ವದ ಮೂಲಕ ಕಾನೂನು ಹೊರಗೆ ಬರಬೇಕು. ಹಾಗೆಯೇ ದೇವರ ಮೂಲಕವೇ ಧರ್ಮ ಹೊರಗೆ ಬರಬೇಕು. ದೇವರ ಧರ್ಮ ದೇವರು ತಿಳಿಸದೆ ಇತರರಿಗೆ ಯಾರಿಗೂ ತಿಳಿಯುವುದಿಲ್ಲ, ಅದು ಎಲ್ಲರಿಗೂ ರಹಸ್ಯವೇ. ಇದೇ ವಿಷಯವನ್ನೇ ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗವೆಂಬ ಅಧ್ಯಾಯದಲ್ಲಿ ಮೊದಲನೇ ಶ್ಲೋಕದಲ್ಲಿಯೇ ಭಗವಂತನು ಹೀಗೆ ಹೇಳುತ್ತಿದ್ದಾನೆ.

**1ನೇಶ್ಲೋ ॥ *ಇದಂ ತುತೇ ಗುಹ್ಯತಮಂ ಪ್ರವಕ್ಷ್ಯಾಂ ಮ್ಯನಸೂಯವೇ |***
***ಜ್ಞಾನಂ ವಿಜ್ಞಾನ ಸಹಿತಂ ಯದ್ಜ್ಞಾತ್ವಾ ಮೋಕ್ಷ್ಯಸೇ ಶುಭಾತ್ ॥***

**ಭಾವಾರ್ಥ :–** ಇದು ಅತಿ ರಹಸ್ಯವಾದ ಜ್ಞಾನ. ಯಾರಿಗೂ ತಿಳಿಯದ ನನ್ನ ಜ್ಞಾನವನ್ನು ವಿಜ್ಞಾನ ಸಹಿತವಾಗಿ ವಿಶದವಾಗಿ ಹೇಳುತ್ತೇನೆ ಕೇಳು. ಇದನ್ನು ತಿಳಿಯುವುದರಿಂದ ಎಲ್ಲಾ ಅಶುಭಗಳು ತೊಲಗಿ ಮೋಕ್ಷವನ್ನು ಪಡೆಯುತ್ತೀಯಾ.

ದೇವರ ಧರ್ಮ ಅತಿ ರಹಸ್ಯವಾದುದು ಎಂದು ದೇವರೇ ಹೇಳಿದಾಗ ಅದು ಯಾರಿಗೂ ತಿಳಿಯದ ವಿಷಯವೆಂದು ಸ್ಪಷ್ಟವಾಗಿ ತಿಳಿಯುತ್ತಿದೆ. ದೇವರ ಜ್ಞಾನ ದೇವರ ಮೂಲಕವೇ ತಿಳಿಯಲ್ಪಡುತ್ತದೆ ಎಂಬುವುದಕ್ಕೆ ಮೇಲಿನ ಶ್ಲೋಕವೇ ಸಾಕ್ಷಿಯೆಂದು ಹೇಳಬಹುದು. ಇದೇ ವಿಷಯವನ್ನೇ ಖುರ್‌ಆನ್ ಗ್ರಂಥದಲ್ಲಿ ಅಲಿ ಇಮ್ರಾನ್ ಎನ್ನುವ 3ನೇ ಸುರಾದಲ್ಲಿ 7ನೇ ಆಯತ್‌ನಲ್ಲಿ ಸಹ ಹೀಗೆ ಸಾರಾಂಶ ಇದೆ. "ದೇವರು ಪ್ರಜೆಗಳಿಗೆ ಖುರ್‌ಆನ್ ಗ್ರಂಥವನ್ನು ಕೊಟ್ಟಿದ್ದಾನೆ. ಅದರಲ್ಲಿ 'ಮುತಷಾಭಿಹತ್' ಎನ್ನುವ ಬಹಳ ರಹಸ್ಯವಾದ ವಿಷಯಗಳು ಇವೆ. ಅವುಗಳ ಜ್ಞಾನ ದೇವರಿಗೆ ಹೊರತು ಯಾರಿಗೂ ತಿಳಿದಿಲ್ಲವೆಂದು." ಇಲ್ಲಿ ಸಹ ಯಾರಿಗೂ ತಿಳಿಯದಿರುವುದು ದೇವರ ಜ್ಞಾನವೆಂದು, ಅದನ್ನು ದೇವರು ಹೇಳಿದರೇನೆ ಅರ್ಥವಾಗುತ್ತದೆ ಎಂದು ಇದೆ ಅಲ್ಲವೆ! ದೇವರ ಜ್ಞಾನ ದೇವರಿಗೆ ಹೊರತು ಯಾರಿಗೂ ತಿಳಿಯದಿರುವಾಗ, ಆತನು ತಿಳಿಸಿದರೆ

ಹೊರತು ಇತರರಿಗೆ ಯಾರಿಗೂ ತಿಳಿಯದು. ಇಲ್ಲಿ ಮುಖ್ಯವಾದ ಸಮಸ್ಯೆ ಏನೆಂದರೆ! ದೇವರು ಕೆಲಸ ಮಾಡದವನು, ಕಾಣಿಸದವನು, ಹೆಸರಿಲ್ಲದವನು ಆದಾಗ ಮನುಷ್ಯರಿಗೆ ಯಾರಿಗೂ ತಿಳಿಯದ ತನ್ನ ಧರ್ಮವನ್ನು ಭೂಮಿಮೇಲೆ ಮನುಷ್ಯರಿಗೆ ಹೇಗೆ ತಿಳಿಸುತ್ತಾನೆ ಎಂಬ ಸಂಶಯ ಬಾರದೆ ಇರುವುದಿಲ್ಲ. ಹೀಗೆ ಪ್ರಶ್ನೆ ಬರುತ್ತದೆಂದು ಗ್ರಹಿಸಿದ ದೇವರು ಮೊದಲೆ ಅದಕ್ಕೆ ಉತ್ತರವಾಗಿ ಖುರ್‌ಆನ್ ಗ್ರಂಥದಲ್ಲಿ ಹೀಗೆ ಬರೆದಿದ್ದಾನೆ. 42ನೇ ಸುರಾ 51ನೇ ಆಯತ್‌ನಲ್ಲಿ ಸಾರಾಂಶ ಹೀಗೆ ಇದೆ. "ದೇವರು ಪ್ರತ್ಯಕ್ಷವಾಗಿ ಯಾರಜೊತೆ ಮಾತನಾಡುವುದಿಲ್ಲ. ಆದರೆ ವಹಿ ಮೂಲಕ (ದಿವ್ಯವಾಣಿ ಮೂಲಕ) ಇಲ್ಲವೆ ತೆರೆ ಹಿಂದಿನಿಂದ, ಇಲ್ಲವೆ ಒಬ್ಬ ದೂತನನ್ನು (ವ್ಯಕ್ತಿಯನ್ನು) ಕಳುಹಿಸುವುದರ ಮೂಲಕ ತನ್ನ ಜ್ಞಾನವನ್ನು (ಧರ್ಮವನ್ನು) ತಿಳಿಸುತ್ತಾನೆ. ಬಂದಿರುವ ದೂತ (ಭಗವಂತನು) ದೇವರ ಸಂದೇಶ ಪ್ರಜೆಗಳಿಗೆ ತಿಳಿಸುತ್ತಾನೆ." ಈ ವಿಧವಾಗಿ ದೇವರು ಮೂರು ವಿಧಗಳಲ್ಲಿ ಅವಶ್ಯಕತೆಯನ್ನು ಅನುಸರಿಸಿ ತಿಳಿಸುತ್ತಾನೆ. ಸೃಷ್ಟಿ ತಯಾರಾದ ಪ್ರಾರಂಭದಲ್ಲಿ ದಿವ್ಯವಾಣಿ ಮೂಲಕ ತನ್ನ ಧರ್ಮವನ್ನು ಸೂರ್ಯನಿಗೆ ಹೇಳಿದಂತೆ ಭಗವದ್ಗೀತೆಯಲ್ಲಿ ಇದೆ. ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿ ಒಂದನೇ ಶ್ಲೋಕದಲ್ಲಿಯೇ ಆ ವಿಷಯವು ಇದೆ. ತೆರೆ ಹಿಂದಿನಿಂದ ಅಂದರೆ ಹೇಳುವ ವ್ಯಕ್ತಿ ಇದ್ದರೂ, ಕಾಣಿಸದಂತೆ ಮಾತನಾಡುವುದನ್ನು ತೆರೆ ಹಿಂದುಗಡೆಯಿಂದ ಅಂದಿದ್ದಾರೆ. ಆ ವಿಧವಾಗಿ ಮುಹಮ್ಮದ್ ಪ್ರವಕ್ತನಿಗೆ ಜಿಬ್ರಯೇಲ್ ಕಾಣಿಸದಂತೆ ಹೇಳಿದ್ದಾನೆ. ಇನ್ನು ದೇವರು ಕಳುಹಿಸಿದಾಗ ಬಂದಿರುವ ದೂತ ಕೃಷ್ಣನು ಎಂದು ಸುಲಭವಾಗಿ ಹೇಳಬಹುದು. ಕೃಷ್ಣನನ್ನು ಖುರಾನ್ ಪ್ರಕಾರ ದೇವರ ಹತ್ತಿರದಿಂದ ಬಂದಿರುವ ವ್ಯಕ್ತಿಯಾಗಿ, ನಮ್ಮ ಲೆಕ್ಕದಲ್ಲಿ ಭಗವಂತನಾಗಿ ಹೇಳಬಹುದು.

ಈ ವಿಧವಾಗಿ ದೇವರು ಎಲ್ಲಿಯೂ ಯಾರಜೊತೆಯೂ ಪ್ರತ್ಯಕ್ಷವಾಗಿ ಮಾತನಾಡದಂತೆ, ತನ್ನ ಧರ್ಮವನ್ನು ಇಲ್ಲಿಗೆ ಮೂರು ವಿಧಗಳಾಗಿ, ಮೂರು ಪ್ರಾಂತಗಳಲ್ಲಿ, ಮೂರು ಯುಗಗಳಲ್ಲಿ ತಿಳಿಸಿದ್ದಾನೆಂದು ಹೇಳಬಹುದು.

ಕೃತಯುಗದ ಪ್ರಾರಂಭದಲ್ಲಿಯೇ ಅಂದರೆ ಸೃಷ್ಟ್ಯಾದಿಯಲ್ಲಿಯೇ ಶಬ್ದರೂಪದಲ್ಲಿ ಹೇಳಿದ್ದಾನೆ. ದ್ವಾಪರಯುಗದ ಕೊನೆಯಲ್ಲಿ ಭಗವಂತನಾಗಿ ಇಲ್ಲವೆ ದೇವರ ಹತ್ತಿರದಿಂದ ಕಳುಹಿಸಿದ ವ್ಯಕ್ತಿಯಾಗಿ ಶ್ರೀಕೃಷ್ಣನು ಬಂದಿದ್ದಾನೆ. ಕಲಿಯುಗದಲ್ಲಿ ಜಿಬ್ರಯೀಲ್ ಎನ್ನುವಾತನು ಇದ್ದು, ಮುಹಮ್ಮದ್ ಪ್ರವಕ್ತನಿಗೆ ಕಾಣಿಸದಂತೆ ಇದ್ದೂ ದೇವರ ಜ್ಞಾನವನ್ನು ಹೇಳುವುದು ನಡೆದಿದೆ. ಇಲ್ಲಿಗೆ ಮೂರು ವಿಧಗಳ ಮೂರು ಸಮಯಗಳಲ್ಲಿ ದೇವರು ತನ್ನ ಜ್ಞಾನವನ್ನು ತಿಳಿಸಿದ್ದಾನೆ. ಮೂರುಬಾರಿ ತಿಳಿಸಿದ ಜ್ಞಾನ ಮೂರು ಗ್ರಂಥಗಳ ರೂಪವಾಗಿ ಇದೆ. ಮೂರು ಗ್ರಂಥಗಳ ರೂಪದಲ್ಲಿ ಜ್ಞಾನವಿದ್ದರೂ ಅದು ಈಗಿನ ಮಾನವರಿಗೆ ಅರ್ಥವಾಗಲಿಲ್ಲ. ಆದ್ದರಿಂದ ಮೂರು ಗ್ರಂಥಗಳಲ್ಲಿನ ಜ್ಞಾನವನ್ನು ವಿವರಿಸಿ ಹೇಳುವುದಕ್ಕೆ ಭಗವಂತನು ಮತ್ತೊಂದು ಸಲ ಬರಬೇಕಾಗಿದೆ.

ದೇವರು ಮನುಷ್ಯನಿಗೆ ತಿಳಿಯಬೇಕಾದ ತನ್ನ ಧರ್ಮಗಳನ್ನು ಜ್ಞಾನರೂಪದಿಂದ ತಿಳಿಸಿದಾಗ, ಅದು ಸ್ವಲ್ಪ ಮೂರು ಮತಗಳಾಗಿ ತಯಾರಾಗಿದೆ. ಅದು ತಯಾರು ಆಗಲಿಲ್ಲ ಆದರೆ ಮನುಷ್ಯರೇ ಹಾಗೆ ಮತಗಳಾಗಿ ಮಾಡಿದ್ದಾರೆ. ದೇವರು ತನ್ನ ಜ್ಞಾನವನ್ನು ಧರ್ಮಗಳಾಗಿ ಹೇಳಿದ್ದಾನಾಗಲಿ, ಮತಗಳಾಗಿ ಹೇಳಲಿಲ್ಲ. ಮನುಷ್ಯ ದೇವರು ಹೇಳಿದ ಜ್ಞಾನವನ್ನು ತನ್ನ ಸ್ವಾರ್ಥದಿಂದ ಮತಗಳಾಗಿ ರೂಪ ಬದಲಿಸಿದ್ದಾನೆ. ದೇವರ ಜ್ಞಾನವನ್ನು ಅಡ್ಡ ಇಟ್ಟುಕೊಂಡು ಅದನ್ನು ತೋರಿಸುತ್ತಾ ತಮ್ಮ ಮತವನ್ನು ಬೆಳಸಿಕೊಳ್ಳಬೇಕೆಂದು ನೋಡುತ್ತಿದ್ದಾನೆ. ಮತವೆಂಬ ಗುಂಪನ್ನು ಹೆಚ್ಚಿಸಿಕೊಳ್ಳುವುದಕ್ಕೆ ದೇವರ ಜ್ಞಾನವನ್ನು ಉಪಯೋಗಿಸಿಕೊಳ್ಳುತ್ತಾ ದೇವರ ಜ್ಞಾನವನ್ನು ಹೀನವಾಗಿ ಮಾತನಾಡುತ್ತಿದ್ದಾರೆ. ದೇವರು ಕೊಟ್ಟಿರುವ ಜ್ಞಾನವನ್ನು ತಮ್ಮ ಮತಗ್ರಂಥವೆಂದು ಹೇಳಿಕೊಳ್ಳುತ್ತಿದ್ದಾನೆ. ದೇವರ ಜ್ಞಾನವನ್ನು ಉಪಯೋಗಿಸಿಕೊಂಡು ಜನ್ಮಗಳಿಂದ ಹೊರಬಿದ್ದು ಮೋಕ್ಷವನ್ನು ಹೊಂದದೆ, ದೇವರ ಗ್ರಂಥವನ್ನು ತಮ್ಮ ಮತಗ್ರಂಥವೆಂದು ಹೇಳಿಕೊಳ್ಳುವುದರಿಂದ, ದೇವರ ದೃಷ್ಟಿಯಲ್ಲಿ ಮತದ ಹಿರಿಯರು ದೋಷಿ ಗಳಾಗುತ್ತಿದ್ದಾರೆ.

ಆಯಾ ಮತಗಳಲ್ಲಿ ಆಯಾ ಬೋಧಕರು ಒಂದುಕಡೆ ದೈವಜ್ಞಾನವನ್ನು ಹೇಳುತ್ತಿದ್ದೇವೆಂದು ಹೇಳುತ್ತಾ, ಅವರಿಗೆ ವಾಕ್ಯಗಳ ನಿಜಭಾವ ತಿಳಿಯದೆ ಹೋಗುವುದರಿಂದ, ತಮಗಿಷ್ಟಬಂದಂತೆ ಹೇಳುವುದಕ್ಕೆ ಪ್ರಾರಂಭಿಸಿದ್ದಾರೆ. ತಪ್ಪು ಭಾವನೆಗಳನ್ನು ಹೇಳುವುದರಿಂದ ತಮ್ಮ ಬೋಧನೆಗಳನ್ನು ಕೇಳಿದವರೆಲ್ಲರೂ ಅದೇ ನಿಜವೆಂದು ನಂಬಿ, ತಮ್ಮ ಬೋಧಕರು ಹೇಳಿದಂತೆ ನಡೆದುಕೊಳ್ಳುವುದರಿಂದ ಹೇಳಿದವನೂ, ಕೇಳಿದವರೂ ಎಲ್ಲರೂ ದೇವರ ಮಾರ್ಗದಲ್ಲಿ ದೋಷಿಗಳಾಗುತ್ತಿದ್ದಾರೆ. ಅಂತಹವರಿಗೆ ನ್ಯಾಯಸ್ಥಾನ, ವಿಚಾರಣೆ ಕೊನೆಗೆ ಶಿಕ್ಷೆ ತಪ್ಪುವುದಿಲ್ಲ. ಗುರುಗಳು ಹೇಳಿದಂತೆ ಕೇಳಿದ್ದೇವೆ ನಮ್ಮದೇನು ತಪ್ಪು ಎಂದರೂ, ಆತನು ಶಿಕ್ಷೆಯಿಂದ ತಪ್ಪಿಸಿಕೊಳ್ಳಲಾರನು. ದೈವಮಾರ್ಗ ಎಂದರೆ ಏನೋ ತಿಳಿಯದೆ, ದೈವಮಾರ್ಗದೊಳಗೆ ಬಾರದವನಿಗೆ, ಪ್ರಕೃತಿ ಸಂಬಂಧ ಪಾಪಗಳ ಶಿಕ್ಷೆಗಳು ಹೊರತು, ದೈವಸಂಬಂಧ ಶಿಕ್ಷೆಗಳಿರುವುದಿಲ್ಲ. ದೇವರ ಮಾರ್ಗವನ್ನು ಅನುಸರಿಸುತ್ತಿದ್ದೇನೆಂದು ಹೇಳಿಕೊಳ್ಳುತ್ತಾ ಶಿಷ್ಯರಾಗಿದ್ದರೂ, ಗುರುಗಳಾಗಿದ್ದರೂ, ಸ್ವಾಮೀಜಿಗಳಾಗಿದ್ದರೂ, ಯಾರು ಯಾವ ಸ್ಥಾನದಲ್ಲಿದ್ದರೂ ಅವರು ದೇವರ ದೃಷ್ಠಿಯಲ್ಲಿ ದೋಷಿಗಳೇ, ಆದ್ದರಿಂದ ಅವರಿಗೆ ವಿಚಾರಣೆ ತಪ್ಪುವುದಿಲ್ಲ.

ಈ ನಮ್ಮ ಮಾತುಗಳನ್ನು ಕೇಳಿದ ಕೆಲವರು ಅಥವಾ ಎಲ್ಲಾ ಮತದಲ್ಲಿನ ಎಲ್ಲರೂ ನಮ್ಮ ಮಾತುಗಳನ್ನು ವಿರೋಧಿಸಿ "ನಾವ್ಹೇಗೆ ದೋಷಿಗಳಾಗುತ್ತೇವೆ? ನಮ್ಮ ಗ್ರಂಥಗಳನ್ನು ನಾವು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದೇವೆ, ದೇವರು ಹೇಳಿದಂತೆ ನಡೆಯುತ್ತಿದ್ದೇವೆ. ದೇವರು ಹೇಳಿದ ಜ್ಞಾನಕ್ಕೆ ವಿನಹ ನಾವು ಯಾವ ಪಕ್ಕದಾರಿಯಲ್ಲಿ ಹೋಗಲಿಲ್ಲ. ದೇವರು ಹೇಳಿದಂತೆ ದೇವರನ್ನೇ ಆರಾಧಿಸುತ್ತಿದ್ದೇವೆ. ಎಲ್ಲಾ ವಿಧಗಳಲ್ಲಿ ದೇವರು ಹೇಳಿದಂತೆ ನಡೆದುಕೊಳ್ಳುವ ನಮ್ಮನ್ನು, ದೋಷಿಗಳಾಗಿ ನಿಲ್ಲಬೇಕಾಗಿಬರುತ್ತದೆ, ಶಿಕ್ಷೆಗಳು ತಪ್ಪುವುದಿಲ್ಲ ಎನ್ನುವುದು ಸಮಂಜಸವೇ" ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ದೈವಮಾರ್ಗದಲ್ಲಿ ಹೋಗುವವರನ್ನು, ದೇವರ ಜ್ಞಾನದ ಪ್ರಕಾರ

ನಡೆದುಕೊಳ್ಳುವವರನ್ನು ಕುರಿತು ನಾನು ಹೇಳುವುದಿಲ್ಲ. ದೇವರ ಜ್ಞಾನವನ್ನು ಹೇಳಿಕೊಳ್ಳುತ್ತಾ ತನ್ನ ಮತದ ಮೇಲೆ ವ್ಯಾಮೋಹ ಇರುವವರನ್ನು ಕುರಿತು ಹೇಳುತ್ತಿದ್ದೇನೆ. ಕುಂಬಳಕಾಯಿ ಕಳ್ಳ ಎಂದರೆ ಎಲ್ಲರೂ ಹೆಗಲುನೋಡಿಕೊಳ್ಳುವ ಕೆಲಸವಿಲ್ಲ. ನಮ್ಮ ಮತ ಬೇರೆಯೆಂದು, ನಿಮ್ಮ ಮತ ಬೇರೆ ಎಂಬುವವರನ್ನು ಕುರಿತು, ನಮ್ಮ ದೇವರು ಬೇರೆ ನಿಮ್ಮ ದೇವರು ಬೇರೆ ಎನ್ನುವವರ ಬಗ್ಗೆ, ನಮ್ಮ ಗ್ರಂಥ ಬೇರೆ, ನಿಮ್ಮಗ್ರಂಥ ಬೇರೆ ಎನ್ನುವವರನ್ನು ಕುರಿತು ಹೇಳುತ್ತಿದ್ದೇವೆ.

ಸರ್ವ ಸೃಷ್ಟಿಗೆ ದೇವರು ಒಬ್ಬನೇ ಅಧಿಪತಿಯಾದಾಗ ನಿಮ್ಮ ದೇವರು ನಮ್ಮ ದೇವರು ಎನ್ನುವುದು ತಪ್ಪು ಅಲ್ಲವೆ! ಕ್ರೈಸ್ತರಿಗೆ, ಹಿಂದುಗಳ ಕೃಷ್ಣನೆಂದರೆ ಹೇಳನೆ ಭಾವ. ಹಾಗೆ ಹಿಂದುಗಳಿಗೆ ಯೇಸುಪ್ರಭು ಎಂದರೆ ಅಲರ್ಜಿ ಯಾಗಿರುತ್ತದೆ. ಇನ್ನೂ ಹಿಂದುಗಳಿಗಿಂತ, ಕ್ರೈಸ್ತರಿಗಿಂತ ನಾವು ಸರಿಯಾದ ಮಾರ್ಗದಲ್ಲಿ ಇದ್ದೇವೆಂದು, ನಮ್ಮ ಹುಡುಗಿಯನ್ನು ವಿವಾಹವಾಗಬೇಕೆಂದರೆ ನಮ್ಮ ಮತದೊಳಗೆ ಬರಬೇಕಾಗಿದ್ದೇ ಎಂದು ಮುಸ್ಲೀಮ್‌ರು ಎನ್ನುತ್ತಿದ್ದಾರೆ. ಎಷ್ಟೋ ದೊಡ್ಡ ಜ್ಞಾನಿ ಅಂದುಕೊಂಡವನಿಗೂ ಸಹ ಮತ ಎನ್ನುವ ರೋಗ ಇಲ್ಲವೇನೋ ಗುಂಡಿಗೆಯ ಮೇಲೆ ಕೈ ಹಾಕಿಕೊಂಡು ಹೇಳಿರಿ. ಮೂರು ಮೂಲ ಗ್ರಂಥಗಳಾದ ಭಗವದ್ಗೀತೆ, ಬೈಬಲ್, ಖುರಾನ್‌ಗಳಲ್ಲಿ ಒಂದೇ ಭಾವ ಕೊಡುವ ಜ್ಞಾನ ಇದೆಯೆಂದು, ಮೂರು ಗ್ರಂಥಗಳನ್ನು ಮೂರು ಕಾಲಗಳಲ್ಲಿ, ಮೂರು ಪ್ರಾಂತಗಳವರಿಗೆ ಕೊಟ್ಟಿರುವವೆಂದು, ಮೂರು ಗ್ರಂಥಗಳಲ್ಲಿ ಹೇಳಿರುವುದು ಒಂದೇ ದೈವವೊಂದರ ಜ್ಞಾನವೆಂದು, ಯಾರು ಹೇಗೆ ಹೇಳಿಕೊಂಡರೂ ಮನುಷ್ಯರೆಲ್ಲರಿಗೂ ದೇವರು ಒಬ್ಬನೇ ಎಂದು ಮತಗಳಿಗೆ ಅತೀತವಾಗಿ ನಾವು ಜ್ಞಾನವನ್ನು ಹೇಳಿದರೆ, ನಮ್ಮ ಜ್ಞಾನ ನಮಗೆ ಗೊತ್ತು ನಿಮಗೆ ತಿಳಿದಿಲ್ಲ ಎನ್ನುವ ಮುಸ್ಲೀಮ್‌ರು ಇದ್ದಾರೆ, ಕ್ರೈಸ್ತರೂ ಇದ್ದಾರೆ. ಹಿಂದುಗಳಾದರೆ ನೇರವಾಗಿ ನಮ್ಮನ್ನು ಕ್ರೈಸ್ತವವನ್ನು ಬೋಧಿಸುತ್ತಿದ್ದಾರೆಂದು ಆರೋಪಿಸುವುದು ನಡೆದಿದೆ. ಮತಾತೀತ ಜ್ಞಾನವನ್ನು ಹೇಳಿರುವುದರಿಂದ ನಾವು ಸ್ವತಃ ಹಿಂದೂ, ಕ್ರೈಸ್ತ, ಮುಸ್ಲೀಮ್ ಎನ್ನುವ ಮೂರು ಮತಗಳಿಂದ

ಎಷ್ಟೋ ದಾಳಿಗಳನ್ನು, ತೊಂದರೆಗಳನ್ನು ಎದುರಿಸುತ್ತಿದ್ದೇವೆ. ಇಂತಹ ಅನುಭವಗಳು ನಮಗಿರುವಾಗ ಯಾರನ್ನು ಮತಗಳ ಮಮಕಾರ ಇಲ್ಲದವರಾಗಿ ಹೇಳಬೇಕು? ಎಲ್ಲರೂ ಮತಗಳ ಮತ್ತಿನಲ್ಲಿ ಪೂರ್ತಿ ಮುಳಿಗಿದವರಾಗಿದ್ದಾರೆ. ದೇವರು ಹೇಳದ ಮತವನ್ನು ಸೃಷ್ಟಿಸಿಕೊಂಡ ಪ್ರತಿ ಒಬ್ಬರೂ ದೇವರ ದೃಷ್ಟಿಯಲ್ಲಿ ಅಪರಾಧಿಗಳೇ. ಈ ವಿಧವಾಗಿ ಹೇಳುತ್ತಾ ಹೋದರೆ ಎಲ್ಲಾ ಮತಗಳಲ್ಲಿಯೂ ನಾವು ಭಕ್ತರೂ, ಜ್ಞಾನಿಗಳೂ ಎನ್ನುತ್ತಾ ಸೃಷ್ಟಿಕರ್ತನಾದ ದೇವರ ಬಗ್ಗೆ ತಮಗೆ ತಿಳಿಯದೆಯೇ ವಿರುದ್ಧವಾಗಿ ಪ್ರವರ್ತಿಸುತ್ತಿದ್ದಾರೆ.

ಭೂಮಿ ಮೇಲೆ ಮನುಷ್ಯರಿಗೆ ದೇವರು ಮೂರು ವಿಧಾನಗಳಾಗಿ ಜ್ಞಾನವನ್ನು ತಿಳಿಸಿದ್ದಾನೆ. ದಿವ್ಯವಾಣಿಯಾಗಿ ಸೃಷ್ಟ್ಯಾದಿಯಲ್ಲಿ ಒಂದೇ ಸಲ ಹೇಳಿದ್ದಾನೆ. ತೆರೆ ಹಿಂದಿರುವ ಜ್ಞಾನಿಯಿಂದ ಒಬ್ಬ ಮಹಮ್ಮದ್ ಪ್ರವಕ್ತನಿಗೇ ಅಲ್ಲದೆ, ಎಷ್ಟೋ ಸಲ ಎಷ್ಟೋಜನರಿಗೆ ಬೋಧಿಸಿದ್ದಾನೆ. ಹಾಗೇ ತಾನು ಕಳುಹಿಸುವ ದೂತನ ಮೂಲಕ ಎಂದರೆ ತನ್ನ ಅಂಶದಿಂದ ಕಳುಹಿಸುವ ಭಗವಂತನ ಮೂಲಕ ದ್ವಾಪರಯುಗದಲ್ಲಿ ಒಂದೇಸಲ ಅಲ್ಲದೆ ಪೂರ್ವದಲ್ಲಿ ಎಷ್ಟೋಬಾರಿ ಬೋಧಿಸಿದ್ದಾನೆ. ನಂತರ ಬರುವ ಕಾಲದಲ್ಲಿಯೂ ಸಹ ಧರ್ಮಗಳಿಗೆ ಮುಪ್ಪು ಬಂದಾಗ, ಅಧರ್ಮಗಳು ಬೆಳೆದುಹೋದಾಗ, ಪುನಃ ಇದೇ ವಿಧವಾಗಿ ಹೇಳುತ್ತೇನೆಂದು ಸಹ ಹೇಳಿದ್ದಾನೆ. ದ್ವಾಪರಯುಗದ ನಂತರ ಸಹ ದೇವರ ಹತ್ತಿರದಿಂದ ಕಳುಹಿಸಿದ ದೂತ ಬಂದುಹೋದಂತೆ ಕೆಲವು ಆಧಾರಗಳಿವೆ. ಈ ವಿಧವಾಗಿ ದೇವರು ಮನುಷ್ಯರಿಗೆ ತನ್ನ ಧರ್ಮವನ್ನು ತಿಳಿಸುವುದಕ್ಕೆ ಅನೇಕಸಲ ಪ್ರಯತ್ನ ಮಾಡುತ್ತಿರುವಾಗ, ಮನುಷ್ಯ ತನ್ನವರೆಗೂ ಬಂದಿರುವ ದೇವರ ಜ್ಞಾನವನ್ನು ತಪ್ಪು ಭಾವನೆಯಿಂದ ಅರ್ಥ ಮಾಡಿಕೊಂಡು ದೇವರಿಗೆ ವಿರುದ್ಧವಾಗಿ ಬೋಧಿಸುವುದು, ದೇವರು ಹೇಳಿದಂತೆ ಆರಾಧಿಸದೆ, ತನ್ನ ಇಷ್ಟಬಂದಂತೆ ಆರಾಧಿಸುವುದರಿಂದ ಅಂತಹ ಮನುಷ್ಯರು ದೇವರ ಧರ್ಮದ ಬಳಿ ನೇರಸ್ತರು ಅಲ್ಲವೆ? ಅವರು ಶಿಕ್ಷಾರ್ಹರು ಆಗುವುದಿಲ್ಲವೇ ಎಂದು ಪ್ರಶ್ನಿಸುತ್ತಿದ್ದೇನೆ.

ಮನುಷ್ಯರು ಮತಗಳನ್ನು ಸೃಷ್ಠಿಸಿಕೊಂಡರೂ, ನನಗೆ ತಿಳಿದಮಟ್ಟಿಗೆ ಮೂರು ಮತದವರಿಗೆ ಮೂರು ಗ್ರಂಥಗಳನ್ನು ದೇವರು ಏರ್ಪಡಿಸಿದ್ದಾನೆ. ಮೂರು ಗ್ರಂಥಗಳಲ್ಲಿಯೂ ದೇವರು ತನ್ನ ಜ್ಞಾನವನ್ನು ತುಂಬಿಕೊಟ್ಟಿದ್ದಾನೆ. ಅವುಗಳಲ್ಲಿ ಒಂದು ಗ್ರಂಥದಲ್ಲಿ ದೈವಜ್ಞಾನಿ ಆದ ಒಂದು ಗ್ರಹ ಕಾಣಿಸದಂತೆ ಬೋಧಿಸಿದ ದೇವರ ಜ್ಞಾನ ಇದೆ. ಎರಡು ಗ್ರಂಥಗಳಲ್ಲಿ ದೇವರ ಹತ್ತಿರದಿಂದ ಕಳುಹಿಸಿದ ದೂತ (ದೇವರ ಅಂಶದಿಂದ ತಯಾರಾಗಿ ಬಂದಿರುವ ಭಗವಂತನು) ಹೇಳಿದ ಜ್ಞಾನ ಇದೆ. ಭವಿಷ್ಯತ್ ಕಾಲದಲ್ಲಿ ಯಾರಾದರೂ ದೇವರ ಜ್ಞಾನ ನಮಗೆ ತಿಳಿದಿಲ್ಲ ಎನ್ನದಂತೆ, ದೇವರು ನಮಗೆ ತನ್ನ ಜ್ಞಾನವನ್ನು ತಿಳಿಸಲಿಲ್ಲ ಎನ್ನದಂತೆ, ಮೊದಲೇ ತಾನು ಜ್ಞಾನವನ್ನು ಬೋಧಿಸಿದಂತೆ ಸಾಕ್ಷಿಯಾಗಿ ತನ್ನ ಜ್ಞಾನವನ್ನು ಗ್ರಂಥರೂಪದಲ್ಲಿ ಕೊಟ್ಟಿದ್ದಾನೆ.

ಏನಾದರೂ ತಿಳಿಯದ ವಿಷಯ ನಮ್ಮ ಮಧ್ಯಕ್ಕೆ ಬಂದಾಗ, ಅದರ ವಾಸ್ತವಿಕತೆಯನ್ನು ನೋಡುವುದಕ್ಕೆ, ಅದರಲ್ಲಿ ಅಸತ್ಯ ಏನಾದರು ಇದೆಯಾ ಎಂದು ನೋಡುವುದಕ್ಕೆ, ಅದಕ್ಕೆ ಸಂಬಂಧಿಸಿದ ಶಾಸ್ತ್ರವನ್ನು ಆಧಾರ ಮಾಡಿಕೊಂಡು ನೋಡಬೇಕಾಗಿರುತ್ತದೆ. ಜಲದಲ್ಲಿ ಎಷ್ಟು ರಸಗಳಿವೆ? ಇಲ್ಲವೆ ಎಷ್ಟು ವಾಯುವುಗಳು ಇವೆ? ಎಂದು ನೋಡುವುದಕ್ಕೆ ಅದಕ್ಕೆ ಸಂಬಂಧಿಸಿದ ರಸಾಯನ ಶಾಸ್ತ್ರವನ್ನು ನೋಡುತ್ತೇವೆ. ಹಾಗೆಯೇ ಒಂದು ಲೆಕ್ಕವನ್ನು ಸರಿಯಾಗಿದೆಯೊ ಇಲ್ಲವೆ ಎಂದು ನೋಡುವುದಕ್ಕೆ ಗಣಿತ ಶಾಸ್ತ್ರವನ್ನು ಆಧಾರ ಮಾಡಿಕೊಂಡು ನೋಡುತ್ತೇವೆ. ಮನುಷ್ಯ ಶರೀರದಲ್ಲಿನ ಗುಂಡಿಗೆ ವಿವರ ತಿಳಿಯಬೇಕೆಂದರೆ ಅದಕ್ಕೆ ಆಧಾರವಾದ ಭೌತಿಕಶಾಸ್ತ್ರವನ್ನು ನೋಡುತ್ತೇವೆ. ಈ ವಿಧವಾಗಿ ಪ್ರಪಂಚ ವಿಷಯಗಳನ್ನು, ಪ್ರಪಂಚ ಜ್ಞಾನಗಳನ್ನು ತಿಳಿಯುವುದಕ್ಕೆ ಪಂಚಶಾಸ್ತ್ರಗಳು ಇವೆ. ಅವುಗಳ ಹೆಸರುಗಳು ಕ್ರಮವಾಗಿ 1) ಗಣಿತ ಶಾಸ್ತ್ರ 2) ಖಗೋಳಶಾಸ್ತ್ರ 3) ರಸಾಯನ ಶಾಸ್ತ್ರ 4)ಭೌತಿಕ ಶಾಸ್ತ್ರ 5) ಜ್ಯೋತಿಷ್ಯ ಶಾಸ್ತ್ರ. ಪ್ರಕೃತಿ ಅಥವಾ ಪ್ರಪಂಚ ವಿಷಯಗಳಿಗೆ ಸಂಬಂಧಿಸಿರುವವು ಐದು

ಶಾಸ್ತ್ರಗಳಾಗಿದ್ದು, ಪ್ರಕೃತಿಯನ್ನು ಸೃಷ್ಟಿಸಿದ ದೇವರ ವಿಷಯವನ್ನು ಕುರಿತು ಸತ್ಯಾಸತ್ಯ ನಿರ್ಧಾರಣೆಗೆ ಬ್ರಹ್ಮವಿದ್ಯಾಶಾಸ್ತ್ರವನ್ನು ಪ್ರಮಾಣವಾಗಿ ನೋಡಬೇಕಾಗಿರುತ್ತದೆ. ಮನುಷ್ಯ ದೇವರ ವಿಷಯಗಳನ್ನು ತಿಳಿಯುವುದಕ್ಕೆ ದೇವರ ಗ್ರಂಥವನ್ನು ನೋಡಬೇಕಾಗಿದ್ದೇ. ದೈವಶಾಸ್ತ್ರ (ಬ್ರಹ್ಮವಿದ್ಯಾ ಶಾಸ್ತ್ರ) ಭಗವದ್ಗೀತೆ, ಬೈಬಲ್, ಖುರ್‌ಆನ್ ಗ್ರಂಥಗಳಲ್ಲಿ ಇದೆ. ದೈವವಿಷಯಗಳನ್ನು ನಿರ್ಧಾರಿಸಿಕೊಳ್ಳುವುದಕ್ಕೆ ಹಿಂದುವು ಆದರೆ ಭಗವದ್ಗೀತೆಯನ್ನು, ಕ್ರೈಸ್ತವರಾದರೆ ಬೈಬಲ್‌ನ್ನು, ಮುಸ್ಲೀಮ್‌ರಾದರೆ ಖುರ್‌ಆನ್ ಗ್ರಂಥವನ್ನು ನೋಡಬೇಕಾಗಿರುತ್ತದೆ.

ಇಲ್ಲಿ ಒಂದು ವಿಷಯವನ್ನು ಗ್ರಹಿಸಿದರೆ ಒಬ್ಬ ಮುಸ್ಲೀಮ್‌ನನ್ನು ನಿಮ್ಮ ದೈವ ಗ್ರಂಥ ಯಾವುದು ಎಂದು ಪ್ರಶ್ನಿಸಿದರೆ, ತಕ್ಷಣ ಪವಿತ್ರ ಖುರ್‌ಆನ್ ಗ್ರಂಥವೆಂದು ಹೇಳುತ್ತಿದ್ದಾರೆ. ಹಾಗೆ ಕ್ರೈಸ್ತವರನ್ನು ನಿಮ್ಮ ದೈವಗ್ರಂಥ ಯಾವುದು ಎಂದು ಪ್ರಶ್ನಿಸಿದರೆ, ಪರಿಶುದ್ಧ ಬೈಬಲ್ ಎಂದು ಉತ್ತರ ಹೇಳುತ್ತಾನೆ. ಹಾಗೆಯೇ ಹಿಂದು ಆದ 25 ವರ್ಷ ವಯಸ್ಸಿರುವ M.B.A ಸ್ಟೂಡೆಂಟ್‌ನ್ನು ನಿಮ್ಮ ದೈವಗ್ರಂಥ ಯಾವುದು ಅಂದರೆ ನನಗೆ ಗೊತ್ತಿಲ್ಲ ಎಂದನು. ಮತ್ತೊಬ್ಬನನ್ನು ಕೇಳಿದರೆ ರಾಮಾಯಣ ಅಂದಿದ್ದಾನೆ. ನಿಮ್ಮ ದೇವರ್‍ಯಾರು ಎಂದು ಪ್ರಶ್ನಿಸಿದರೆ ರಾಮನು ಎಂದು ಉತ್ತರ ಕೊಟ್ಟನು. ಕ್ರೈಸ್ತವರನ್ನಾಗಲಿ, ಮುಸ್ಲೀಮರನ್ನಾಗಲಿ ಕೇವಲ ಐದು ವರ್ಷದ ಹುಡುಗನನ್ನು ಪ್ರಶ್ನಿಸಿದರೂ, ಅವರ ಗ್ರಂಥವನ್ನು, ಅವರ ದೇವರನ್ನು ಸುಲಭವಾಗಿ ಹೇಳುತ್ತಿದ್ದಾನೆ. ಆದರೆ ಒಂದು ಹಿಂದೂಮತದಲ್ಲಿ 25 ವರ್ಷಗಳ ವಯಸ್ಸಿರುವವರನ್ನು ಕೇಳಿದರೂ, ಒಬ್ಬರು ಗೊತ್ತಿಲ್ಲ ಎಂದರೆ, ಮತ್ತೊಬ್ಬರೇನೋ ರಾಮಾಯಣ ಎಂದರೆ, ಇನ್ನೊಬ್ಬರು ವೇದಗಳೆಂದು, ಮತ್ತೊಬ್ಬರು ಉಪನಿಷತ್ತುಗಳೆಂದು ಅನೇಕ ವಿಧಗಳ ಉತ್ತರಗಳನ್ನು ಹೇಳುತ್ತಿದ್ದಾರೆ. ಹತ್ತರಲ್ಲಿ ಒಬ್ಬರಾದರೂ ನಮ್ಮ ಗ್ರಂಥ ಭಗವದ್ಗೀತೆ ಎಂದು ಹೇಳುವುದು ಇಲ್ಲ. ಭಾರತ ದೇಶ ಹಿಂದೂದೇಶವಾಗಿ ಹೆಸರುವಾಸಿಯಾದರೂ, ಪ್ರಸ್ತುತ ಕಾಲದಲ್ಲಿ 50 ಲಕ್ಷ ಜನ ಸನ್ಯಾಸಿಗಳಾಗಿ ಇದ್ದರೂ, ಹತ್ತುಸಾವಿರ ಜನಕ್ಕಿಂತ ಅಧಿಕವಾಗಿ ಬೋಧಿಸುವ ಸ್ವಾಮೀಜಿಗಳು ಇದ್ದರೂ, ಕೊನೆಗೆ ಹತ್ತುಮನೆಗೊಬ್ಬನಿ

ಗಾದರೂ ಹಿಂದುಗಳ ಗ್ರಂಥ ಭಗವದ್ಗೀತೆ ಎಂದು ತಿಳಿಯದಂತೆ ಹೋಗುವುದು ಆಶ್ಚರ್ಯ. ಇನ್ನೂ ಆಶ್ಚರ್ಯಕರವಾದ ವಿಷಯ ಏನೆಂದರೆ ಹಿಂದುಗಳಲ್ಲಿ ಶೇಕಡ ಐದರಷ್ಟು ಜನ ಮಾತ್ರವೇ ಭಗವದ್ಗೀತೆಯನ್ನು ಓದಿದ್ದಾರೆ, ಶೇಕಡ 95ರಷ್ಟು ಓದಿಲ್ಲ. ಇನ್ನೂ ವಿವರವಾಗಿ ನೋಡಿದರೆ ಕೆಳಗಿನ ವಿಧವಾಗಿದೆ.

**ಭಗವದ್ಗೀತೆಯನ್ನು ಸ್ವಲ್ಪವೂ ತಿಳಿಯದವರು ಶೇಕಡ 80 ಜನ ಹಿಂದುಗಳು ಇದ್ದಾರೆ.**

**ಭಗವದ್ಗೀತೆಯನ್ನು ಕುರಿತು ಕೇಳಿಯೂ ಸಹ ಅದನ್ನು ನೋಡದವರು ಶೇಕಡ 10 ರಷ್ಟು ಜನ ಹಿಂದುಗಳು ಇದ್ದಾರೆ.**

**ಭಗವದ್ಗೀತೆಯನ್ನು ನೋಡಿಯೂ ಸಹ ಅದನ್ನು ಓದದವರು ಶೇಕಡ 5 ಜನ ಹಿಂದುಗಳು ಇದ್ದಾರೆ.**

**ಭಗವದ್ಗೀತೆಯನ್ನು ನೋಡಿ ಅದನ್ನು ಶ್ರದ್ಧೆಯಿಂದ ಓದಿದವರು ಶೇಕಡ 5 ಜನ ಮಾತ್ರ ಇದ್ದಾರೆ.**

ಭಾರತದೇಶದಲ್ಲಿ ಮೊದಲಿರುವ ಹಿಂದುಗಳ ಸಂಖ್ಯೆ ಕಡಿಮೆಯಾಗುತ್ತಾ ಹೋಗಿ ಕ್ರೈಸ್ತರ ಸಂಖ್ಯೆ ವೇಗವಾಗಿ, ಮುಸ್ಲೀಮರ ಸಂಖ್ಯೆ ನಿಧಾನವಾಗಿ ಬೆಳೆಯುತ್ತಾ ಬಂದಿವೆ. ಇದೇ ಸಮಯದಲ್ಲಿ ಹಿಂದೂ ಮತರಕ್ಷಣೆಗೋಸ್ಕರ ಅನೇಕ ಸಂಘಗಳು ಅನೇಕ ಹೆಸರುಗಳಿಂದ ಹುಟ್ಟಿಬಂದಿವೆ. ಹಿಂದೂ ಧರ್ಮ ಅಂದರೆ ಏನೋ ತಿಳಿಯದವರು ಹಿಂದೂ ರಕ್ಷಣೆ ಎನ್ನುವ ಹೆಸರನ್ನು ಇಟ್ಟುಕೊಂಡು, ಕಣ್ಣುಕಾಣದ  ಹಾವು ತನ್ನ ಮರಿಗಳನ್ನೇ ತಿಂದಂತೆ ಹಿಂದೂ (ಇಂದೂ) ಧರ್ಮವನ್ನು ಬೋಧಿಸುವ ನಮ್ಮನ್ನೇ ಪರ ಮತಗಳ ಕೆಳಗೆ ಲೆಕ್ಕಕಟ್ಟಿದ್ದಾರೆ. ಕ್ರೈಸ್ತರಾಗಲಿ, ಮುಸ್ಲಿಮರಾಗಲಿ ಧರ್ಮವನ್ನು ಕುರಿತು ಪ್ರಶ್ನಿಸುವ ಸಾಮರ್ಥ್ಯವಿರುವ ನಮ್ಮನ್ನು ಸಹ ಧರ್ಮ, ಜ್ಞಾನ ತಿಳಿಯದ ಹಿಂದುಗಳು ಅವಹೇಳನ ಮಾಡುತ್ತಿದ್ದಾರೆ. ಮತದ ಹೆಸರಿನಿಂದ ಹಿಂದುಗಳು ಕೆಲವರು

ಗುಂಪುಗಳಾಗಿ ಏರ್ಪಟ್ಟು ರಾಜಕೀಯವಾಗಿ ಮುಂದಕ್ಕೆ ಹೋಗುತ್ತಾ, ದೈವತ್ವ ವಿಧಾನವನ್ನು ಪ್ರಪಂಚ ಸಂಬಂಧ ರಾಜಕೀಯಕ್ಕೆ ಉಪಯೋಗಿಸಿಕೊಳ್ಳುತ್ತಿದ್ದಾರೆ. ಇದು ದೇವರ ವಿಧಾನದಲ್ಲಿ ಅಪರಾದವಾಗುತ್ತದೆ.

ಯಾವ ಮತದಲ್ಲಾಗಲಿ ದೈವ ವಿಧಾನಕ್ಕೆ, ದೈವ ಜ್ಞಾನಕ್ಕೆ ಆತಂಕ ಉಂಟಾಗದಂತಿರಲು, ಅವರು ಮಾಡುವ ತಪ್ಪು ಒಪ್ಪುಗಳನ್ನು ಸೂಚಿಸುವುದಕ್ಕೆ, ಬ್ರಹ್ಮವಿದ್ಯಾ ಶಾಸ್ತ್ರವನ್ನು ದೇವರು ಅವರವರ ಮತಗಳಲ್ಲಿ ಗ್ರಂಥ ರೂಪದಲ್ಲಿ ಕೊಟ್ಟಿದ್ದಾನೆ. ದೈವಜ್ಞಾನವೆಂಬ ಹೆಸರಿನಿಂದ ಮನುಷ್ಯ ಇಷ್ಟಬಂದಂತೆ ತನ್ನ ಭಾವಗಳನ್ನು ಹೇಳಿಕೊಳ್ಳದಂತೆ ನಿಲ್ಲಿಸುವುದಕ್ಕೆ ಚೆಕ್‌ಪೋಸ್ಟು (ತನಿಖೆ ಕೇಂದ್ರ) ನಂತಹದ್ದು ಶಾಸ್ತ್ರ. ಹಾಲಿನೊಳಗೆ ನೀರು ಬೆರೆಸಿದಂತೆ, ಸ್ವಚ್ಛವಾದ ದೈವ ಜ್ಞಾನದೊಳಗೆ ಮನುಷ್ಯರ ಸ್ವಾರ್ಥ ಜ್ಞಾನ ಬೆರೆತರೂ, ಹಾಲಿನಲ್ಲಿ ನೀರಿನ ಪ್ರಮಾಣವನ್ನು ತೋರಿಸುವ ಯಂತ್ರದಂತೆ ಬ್ರಹ್ಮವಿದ್ಯಾಶಾಸ್ತ್ರ ದೈವಜ್ಞಾನದಲ್ಲಿ ಬೆರೆತ ಮನುಷ್ಯರ ಜ್ಞಾನವನ್ನು ಹೊರಗೆ ತೋರಿಸಬಲ್ಲದು. ಮನುಷ್ಯ ಎಲ್ಲಿಯಾದರೂ, ಎಷ್ಟು ದೊಡ್ಡಸ್ವಾಮಿ ಹತ್ತಿರವಾದರೂ ಜ್ಞಾನವನ್ನು ಕೇಳಿದರೆ ಅದರಲ್ಲಿ ಶಾಸ್ತ್ರಬದ್ಧತೆ ಇದೆಯೋ ಇಲ್ಲವೋ ಗಮನಿಸಿ, ಶಾಸ್ತ್ರೀಯವಾದುದನ್ನು ಗ್ರಹಿಸಿ, ಶಾಸ್ತ್ರೀಯ ಅಲ್ಲದಿರುವುದನ್ನು ಬಿಡಬೇಕೆಂದು ಹೇಳುತ್ತಿದ್ದೇವೆ. ಯಾವ ಯಾವ ಮತಗಳಲ್ಲಿ ಯಾರ್ಯಾರು ಅಶಾಸ್ರೀಯವಾಗಿ ಅವರ ಜ್ಞಾನವನ್ನು ಹೇಳಿ ಕೊಳ್ಳುತ್ತಿದ್ದಾರೋ, ಎಂತಹವರು ದೇವರ ಕೋರ್ಟಿನಲ್ಲಿ ದೋಷಿಗಳಾಗಿ, ಶಿಕ್ಷಾರ್ಹ ರಾಗಿ ನಿಲ್ಲುತ್ತಾರೋ, ಅವರವರ ಜ್ಞಾನವನ್ನನುಸರಿಸಿ ನೋಡುತ್ತೇವೆ. ನಾನು ಯಾರಿಗೆ ಅರ್ಥವಾದರೂ ಆಗದಿದ್ದರೂ ನಾನು ಸ್ವಚ್ಛವಾದ ಇಂದೂ. ಅಷ್ಟೇ ಅಲ್ಲದೆ ನನಗೆ ನಾನು ಸ್ವತಃವಾಗಿ ಇಟ್ಟುಕೊಂಡ ಒಂದು ಬಿರುದು ಇದೆ, ಅದೇ **"ಇಂದೂ ಧರ್ಮಪ್ರದಾತ"**. ಶಾಸ್ತ್ರೀಯವಾದ ಇಂದೂ ಧರ್ಮಗಳಿಂದ (ದೈವ ಜ್ಞಾನ ಧರ್ಮಗಳಿಂದ) ಮೊದಲು ಇಂದೂ (ಹಿಂದೂ) ಮತದಲ್ಲಿನ ಲೋಪ ದೋಷಗಳನ್ನು ಕುರಿತೆ ಹೇಳಿಕೊಳ್ಳೋಣ.

ಸರಿಯಾಗಿ ನಿನ್ನೆಯದಿನ 19-03-2013 ಮಂಗಳವಾರ ಜಮ್ಮಲ ಮಡುಗು ಹತ್ತಿರವಿರುವ ವದ್ದಿರಾಲ ಗ್ರಾಮಸ್ಥನು ಒಬ್ಬರು ನಮ್ಮ ಪ್ರಬೋಧಾಶ್ರಮಕ್ಕೆ ಬಂದು ನಮ್ಮ ಭಕ್ತರಜೊತೆ ದೈವಜ್ಞಾನವನ್ನು ಕುರಿತು ವಾದಿಸಿ ಹೋಗಿದ್ದಾನೆ. ಆತನ ವಾದನೆ ಹೀಗೆ ಇದೆ. ದೇವರನ್ನು ಇಲ್ಲಿಯವರೆಗೂ ಯಾರು ನೋಡಲಿಲ್ಲವೆಂದು, ದೇವರು ಯಾರಿಗೂ ಕಾಣಿಸುವುದಿಲ್ಲವೆಂದು ನೀವು ಹೇಳುತ್ತಿದ್ದೀರಾ. ನಿಮ್ಮ ಮಾತು ಪೂರ್ತಿ ಅಸತ್ಯ, ದೇವರನ್ನು ನೋಡಿದವರು ಎಷ್ಟೋಜನ ಇದ್ದಾರೆ. ರಾಮಕೃಷ್ಣ ಪರಮಹಂಸ "ನಾನು ದೇವರನ್ನು ನೋಡಿದ್ದೇನೆ" ಎಂದು ಹೇಳಿದ್ದಾನಲ್ಲವೆ! ಅಷ್ಟೇ ಅಲ್ಲದೆ ಬಹಳ ಜನರು ನಾವು ನೋಡಿದ್ದೇವೆಂದು ಹೇಳಿದ್ದಾರೆ. ಅಂತಹದರಲ್ಲಿ ನೀವು ಯಾರೂ ನೋಡಲಿಲ್ಲವೆಂದು ಏಕೆ ಹೇಳುತ್ತಿದ್ದೀರಾ ಎಂದು ವಾದಿಸಿದ್ದಾನೆ. ಅದಕ್ಕೆ ನಮ್ಮವರು ವಿವರವಾಗಿ ಹೇಳುವುದಕ್ಕೆ ಪ್ರಯತ್ನಿಸಿದರೆ, ಆತನು ನನಗೆ ಜ್ಞಾನವೆಲ್ಲ ಗೊತ್ತು, ನೀವು ನನಗೇನು ಹೇಳಬೇಕಾದ ಅವಶ್ಯಕತೆ ಇಲ್ಲ. ಸರಿ ಆತನ ಮಾತಿನ ಪ್ರಕಾರವೇ ಆತನ ಜ್ಞಾನವನ್ನು ತಿಳಿದು ಮಾತನಾಡುತ್ತಿರುವಾಗ, ಆತನ ಜ್ಞಾನವನ್ನು ನಾವು ಕೇಳಿದಾಗ, ಅದು ಸರಿಯಾದುದೋ ಅಲ್ಲವೋ ಎಂದು ನಾವು ನೋಡಿಕೊಳ್ಳಬೇಕಾದ ಅವಶ್ಯಕತೆ ಇದೆ. ಹಾಲನ್ನು ಹಾಲಿನಡಿಗ್ರಿ ಯಂತ್ರದಿಂದ ಪರೀಕ್ಷಿಸಿ, ಹಾಲಿನಲ್ಲಿ ನೀರು ಎಷ್ಟಿವೆಯೋ ತಿಳಿದುಕೊಂಡಂತೆ, ಈಗ ಆ ವ್ಯಕ್ತಿ ಹೇಳಿದ ಜ್ಞಾನ ಸರಿಯಾದುದೋ ಅಲ್ಲವೊ, ಬ್ರಹ್ಮವಿದ್ಯಾ ಶಾಸ್ತ್ರವನ್ನು ಆಧಾರ ಮಾಡಿಕೊಂಡು, ಮನುಷ್ಯರಿಗೆ ದೇವರು ಕಾಣಿಸುತ್ತಾನಾ ಇಲ್ಲವಾ ಎಂದು ನೋಡಬೇಕಾಗಿದೆ.

ನಾವು ದೇವರನ್ನು ನೋಡಿದ್ದೇವೆ ಎನ್ನುವವರು ಇಸ್ಲಾಮ್‌ನಲ್ಲಿ ಹೊರತು ಕ್ರೈಸ್ತರಲ್ಲಿಯೂ, ಹಿಂದುಗಳಲ್ಲಿಯೂ ಅಲ್ಲಲ್ಲಿ ಇದ್ದಾರೆ. ರಾಮಕೃಷ್ಣ ಪರಮಹಂಸರನ್ನು ವಿವೇಕಾನಂದರು ಮೊದಲು ಬೇಟಿಯಾದಾಗ "ನೀನು ದೇವರನ್ನು ನೋಡಿದ್ದೀಯಾ? ನನಗೆ ತೋರಿಸುತ್ತೀಯಾ" ಎಂದು ಕೇಳಿದನು. ಆಗ ರಾಮಕೃಷ್ಣ ಪರಮಹಂಸರವರು ನಾನು ದೇವರನ್ನು ನೋಡಿದ್ದೇನೆ, ನಿನಗೂ

ತೋರಿಸುತ್ತೇನೆ" ಎಂದನು. ನಾನು ನೋಡಿದ್ದೇನೆ ನಿನಗೆ ತೋರಿಸುತ್ತೇನೆ ಅನ್ನುವುದರಿಂದ ವಿವೇಕಾನಂದರು ಅಲ್ಲಿಗೆ ಗುರುವನ್ನು ಅನ್ವೇಷಿಸುವುದು ಬಿಟ್ಟು ಪರಮಹಂಸರ ಹತ್ತಿರ ಶಿಷ್ಯನಾಗಿ ಸೇರಿದ್ದಾನೆ. ಈ ವಿಷಯ "ಸ್ವಾಮಿ ವಿವೇಕಾನಂದ ಪ್ರಾಮಾಣಿಕ ಸಮಗ್ರ ಜೀವನಗಾಥ" ಎನ್ನುವ ಗ್ರಂಥದಲ್ಲಿ 84ನೇ ಪುಟದಲ್ಲಿ ಹೀಗೆ ಇದೆ.

**ವಿವೇಕಾನಂದನು :** "ಮಹಾಶಯಾ, ನೀವು ಭಗವಂತನನ್ನು ಕಣ್ಣಾರೆ ನೋಡಿದ್ದೀರಾ?

**ರಾಮಕೃಷ್ಣ :** ಹೌದು ನೋಡಿದ್ದೇನೆ. ಎಷ್ಟೋ ಸ್ಪಷ್ಟವಾಗಿ ನಿನ್ನನ್ನು ನೋಡಿದಷ್ಟು ಸ್ಪಷ್ಟವಾಗಿ, ಇನ್ನೂ ಸ್ಪಷ್ಟವಾಗಿ ನಿನ್ನಜೊತೆ ಮಾತನಾಡುತ್ತಿರುವಂತೆ ಮಾತನಾಡಬಹುದು. ನೋಡಬಹುದು.

ಅದೇ 84ನೇ ಪುಟದಲ್ಲಿ ಕೆಳಗಿನ ಪ್ಯಾರಾದಲ್ಲಿ ವಿವೇಕಾನಂದರು ಹೇಳಿದ ಮಾತುಗಳನ್ನು ಗಮನಿಸೋಣ "ಆತನ ಆಗಿನ ಮಾತುಗಳು, ಸ್ವಲ್ಪಹೊತ್ತಿನ ಕೆಳಗೆ ಪ್ರವರ್ತಿಸಿದ ರೀತಿ ಎಷ್ಟೋ ವಿರುದ್ಧವಾಗಿ ಕಾಣಿಸಿವೆ. ಹಾಗಾದರೆ ಕೆಲವು ಸಮಯಗಳಲ್ಲಿ ಸ್ಪಷ್ಟವಾಗಿಯೂ, ಮತ್ತೆ ಕೆಲವು ಸಮಯಗಳಲ್ಲಿ ಹುಚ್ಚುಹಿಡಿದಂತೆ ಇರುತ್ತಾನಾತನು, ಬಹುಶಃ ಸ್ವಲ್ಪ ಹುಚ್ಚೇನೋ ಎಂದೆನಿಸಿತು." ಈ ವಿಧವಾಗಿ ಪರಮಹಂಸನನ್ನು ಕುರಿತು ಬಹಳಸಲ ವಿವೇಕಾನಂದರು ಅಂದುಕೊಳ್ಳುವುದು ನಡೆದಿದೆ. ದೇವರನ್ನು ನಾನು ನೋಡಿದ್ದೇನೆ ನಿನಗೆ ತೋರಿಸುತ್ತೇನೆಂದು ಹೇಳಿದ ರಾಮಕೃಷ್ಣರು ಬಹಳಕಾಲದವರೆಗೂ ಏನು ತೋರಿಸಲಿಲ್ಲ. ಕೊನೆಗೆ ರಾಮಕೃಷ್ಣರವರಿಗೆ ವ್ಯಾಧಿ ಹೆಚ್ಚಾಗಿ ಮರಣಕಾಲ ಹತ್ತಿರವಾದಾಗ ತನಗೆ ದೇವರನ್ನು ತೋರಿಸುತ್ತೇನೆಂದು ಇಷ್ಟುಕಾಲ ತೋರಿಸದಿರುವುದರಿಂದ ವಿವೇಕಾನಂದನು ಸಹನೆ ಕಳೆದುಕೊಂಡು ಮಾತನಾಡಿದ ಮಾತುಗಳನ್ನು ಅದೇ ಗ್ರಂಥದಲ್ಲಿ 172 ಪುಟದಲ್ಲಿ ನೋಡಬಹುದು.

**ನರೇಂದ್ರನು :** ದೇವರು, ಗೀವರು ಎಂಬುದು ಏನೂ ಇಲ್ಲ. ಇಗೋ ನಾನು

ಈ ಮರವನ್ನು ನೋಡುತ್ತಿದ್ದೇನೆ. ಆ ವಿಧವಾಗಿ ಯಾರಾದರೂ ದೇವರನ್ನು ನೋಡಿದ್ದೀರಾ?

**"ಮ"** : ಏಕೆ, ಗುರುದೇವರು ನೋಡಿದ್ದಾರಲ್ಲ!

**ನರೇಂದ್ರನು :** ಅದು ಆತನ ಮನೋಭ್ರಾಂತಿ ದೃಶ್ಯ ಆಗಬಹುದು.

ನಂತರ ಕೆಲವು ದಿನಗಳಿಗೆ ಪರಮಹಂಸ ರಾಮಕೃಷ್ಣರು ಮರಣಿಸಿದರು. ಪರಮಹಂಸ ಅಸ್ಥಿ ಕಳಶವನ್ನು, ಆತನ ಪೋಟೋವನ್ನು ಇಟ್ಟಿರುವ ಕೋಣೆಯಲ್ಲಿ ಪರಮಹಂಸರಿಗೆ ಪೂಜೆ ಮಾಡಬೇಕೆಂದು ಶಿಷ್ಯರೆಲ್ಲರೂ ಪ್ರಾರಂಭಿಸಿದಾಗ ಪೂಜಾಮಂದಿರದಲ್ಲಿ ನಿಂತುಕೊಂಡು, ಆರಾಧನೆಯನ್ನು ಪ್ರತಿಘಟಿಸುವವನಾಗಿ ಆವೇಶದಿಂದ ವಿವೇಕಾನಂದನು ವಾದಿಸತೊಡಗಿದನು. ಮತ್ತೊಬ್ಬ ಶಿಷ್ಯನು ಸ್ವಾಮಿ ರಾಮಕೃಷ್ಣಾನಂದ ಸಹ ಯುಕ್ತವಾದ ಉತ್ತರಕೊಟ್ಟನು. ಸ್ವಲ್ಪಹೊತ್ತಿಗೆಲ್ಲ ವಾದಗಳು ತಾರಾಸ್ಥಾನಕ್ಕೆ ಸೇರಿಕೊಂಡಿವೆ. ಆಗ ಸ್ವಾಮಿ ರಾಮಕೃಷ್ಣಾನಂದರವರು ಸ್ವಾಮೀಜೀ ಜುಟ್ಟು ಹಿಡಿದುಕೊಂಡು ಎಳೆದುಕೊಳ್ಳುತ್ತಾ ಪೂಜಮಂದಿರದಿಂದ ಹೊರಗೆ ನೂಕಿದನು.

ನೋಡಿದ್ದೀರಾ ವಿವೇಕಾನಂದರು ರಾಮಕೃಷ್ಣ ಪರಮಹಂಸರವರ ಆರಾಧನೆಯಲ್ಲಿ ತನಗೆ ಪರಮಹಂಸರು ದೇವರನ್ನು ತೋರಿಸದಂತೆ ಮರಣಿ ಸಿದ್ದಾನೆಂಬ ಆವೇದನೆಯಿಂದ ಹಾಗೆ ಪ್ರವರ್ತಿಸಿದ್ದಾನೆಂದು ಅರ್ಥವಾಗುತ್ತಿದೆ. ದೇವರು ಕಾಣಿಸುತ್ತಾನೆಂಬುವುದು ಅಸತ್ಯವೆಂದು ವಿವೇಕಾನಂದನಿಗೆ ಚೆನ್ನಾಗಿ ತಿಳಿದುಹೋಗಿದೆ. ಆದ್ದರಿಂದ ಒಬ್ಬ ಭಕ್ತನು ನನಗೆ ದೇವರು ಕಾಣಿಸಲಿಲ್ಲ ಜೀವನವೇ ವ್ಯರ್ಥ ಎಂದು ಹೇಳಿದಾಗ ಪಕ್ಕದಲ್ಲೇ ಇರುವ ವಿವೇಕಾನಂದನು "ಇಗೋ ನಿನ್ನ ಪಕ್ಕದಲ್ಲೆ ಕತ್ತಿ ಇದೆ, ತೆಗೆದುಕೊಂಡು ಇರಿದುಕೋ" ಎಂದು ಅವಹೇಳನವಾಗಿ ಅಂದನು. ಈ ವಿಧವಾಗಿ ಆತನ ಮಾತುಗಳು ದೇವರು ಯಾರಿಗೂ ಕಾಣಿಸುವುದಿಲ್ಲ ಎನ್ನುವ ಉದ್ದೇಶವನ್ನು ತಿಳಿಸುತ್ತಿವೆ.

ಇದೆಲ್ಲವೂ ಯಥಾರ್ಥವಾಗಿ ನಡೆದ ಸಂಘಟನೆಗಳಾಗಿದ್ದು, ಆ ಸಂಘಟನೆಗಳಲ್ಲಿ ರಾಮಕೃಷ್ಣನು ದೇವರನ್ನು ವಿವೇಕಾನಂದರಿಗೆ ತೋರಿಸಲಿಲ್ಲವೆಂದು ಸ್ಪಷ್ಟವಾಗಿದ್ದರೆ, ರಾಮಕೃಷ್ಣಪರಮಹಂಸರು ನೋಡಿದ್ದಾರೆಂದು ಎನ್ನುವುದು ಜ್ಞಾನ ತಿಳಿದವನು ಮಾತನಾಡುವ ಮಾತೇನಾ? ನಾನು ನೋಡಿದ್ದೇನೆ ಎಂದು ಹೇಳಿದ ರಾಮಕೃಷ್ಣ ಪರಮಹಂಸರನ್ನೇ ವಿವೇಕಾನಂದರು ಹುಚ್ಚನ ಕೆಳಗೆ ಲೆಕ್ಕಹಾಕಿದಾಗ! ವದ್ದಿರಾಲ ಗ್ರಾಮದಿಂದ ಬಂದಿರುವವನನ್ನು ಪೂರ್ತಿ ಮತಿಯಿಲ್ಲದವನ ಕೆಳಗೆ ಜಮಕಟ್ಟಬೇಕಾಗಿದ್ದೆ. ಬಾಯಿದೆ ಎಂದು ದೇವರ ಜ್ಞಾನವನ್ನು ಅಶಾಸ್ತ್ರೀಯವಾಗಿ ಮಾತನಾಡಿದರೆ, ಅದು ದೇವರ ಮಾತಿಗೆ ವಿರುದ್ಧವಾಗುವುದರಿಂದ, ಯಾರಾದರೂ ದೇವರ ಶಿಕ್ಷೆಗೆ ಗುರಿಯಾಗಬೇಕಾಗಿದ್ದೆ. ಈಗ ಅಹಂಕಾರದಿಂದ ದೈವಜ್ಞಾನಕ್ಕೆ ವಿರುದ್ಧವಾಗಿ ಮಾತನಾಡಿದರೆ, ಶಿಕ್ಷೆ ಜಾರಿ ಆಗುವಾಗ ಎಲ್ಲಾ ಜಂಬಗಳು ಕಡಿಮೆಯಾಗಿ, ಏಕೆ ಮಾಡಿಕೊಂಡಿದ್ದೇನೆ ಈ ಪಾಪವನ್ನು ಎಂದು ರೋದಿಸಬೇಕಾಗಿರುತ್ತದೆ ಎಚ್ಚರ.

ಇನ್ನು ಬ್ರಹ್ಮವಿದ್ಯಾ ಶಾಸ್ತ್ರಬದ್ಧವಾಗಿ ದೇವರು ಯಾರಿಗೂ ಕಾಣಿಸುವುದಿಲ್ಲ, ಯಾರಜೊತೆಯೂ ಮಾತನಾಡುವುದಿಲ್ಲ ಎನ್ನುವುದಕ್ಕೆ ಇತ್ತ ಭಗವದ್ಗೀತೆಯಲ್ಲಿಯೂ, ಅತ್ತ ಖುರ್‌ಆನ್ ಮತ್ತು ಬೈಬಲ್ ಗ್ರಂಥದಲ್ಲಿಯೂ ಆಧಾರಗಳು ಇವೆ, ಅವುಗಳನ್ನು ಈಗ ನೋಡೋಣ. ಭಗವದ್ಗೀತೆಯಲ್ಲಿ ವಿಜ್ಞಾನ ಯೋಗವೆಂಬ ಅಧ್ಯಾಯದಲ್ಲಿ...

**24ನೇ ಶ್ಲೋ॥ ಅವ್ಯಕ್ತಂ ವ್ಯಕ್ತಿ ಮಾಪನ್ನಂ ಮನ್ಯಂತೇ ಮಾಮಬುದ್ಧಯಃ ।**
**ಪರಂ ಭಾವ ಮಜಾನನ್ತೋ ಮಮಾವ್ಯಯ ಮನುತ್ತಮಮ್॥**

**25ನೇ ಶ್ಲೋ॥ ನಾಹಂ ಪ್ರಕಾಶಃ ಸರ್ವಶ್ಯ ಯೋಗಮಾಯಾ ಸಮಾವೃತಃ ।**
**ಮೂಢೋ ಯಂ ನಾಭಿಜಾನಾತಿ ಲೋಕೋ ಮಾ ಮಜಮವ್ಯಯಮ್॥**

**26ನೇ ಶ್ಲೋ॥ ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿಚ ಭೂತಾನಿ ಮಾಂತು ವೇದನ ಕಶ್ಚನ ॥**

**ಭಾವಗಳು :–** ಎಲ್ಲದಕ್ಕಿಂತ ಉತ್ತಮವಾದುದು, ನಾಶ ಇಲ್ಲದಿರುವುದು ಆದ ದೈವತ್ವವನ್ನು ತಿಳಿಯದ ಬುದ್ಧಿಹೀನರಾದ ಕೆಲವರು, ಯಾರಿಗೂ ಕಾಣಿಸದ ನನ್ನನ್ನು ನಾವು ನೋಡಿದ್ದೇವೆ ಎನ್ನುತ್ತಿದ್ದಾರೆ. ಯೋಗಮಾಯೆ ಮುಚ್ಚಿರುವ ನನ್ನನ್ನು ನೋಡುವುದಕ್ಕೆ ಯಾವ ಮಾನವನಿಗೆ ಕೈಲಾಗುವುದಿಲ್ಲ. ಇತ್ತ ಹುಟ್ಟಾಗಲಿ, ಅತ್ತ ಮರಣವಾಗಲಿ ಇಲ್ಲದ ನಾನು ಹೇಗಿರುವುದು ಅಜ್ಞಾನಿಗಳಾದ ಮನುಷ್ಯರಿಗೆ ತಿಳಿದಿಲ್ಲ. ಈ ಜಗತ್ತಿನಲ್ಲಿ ಸರ್ವ ಜೀವರಾಶಿಗಳಿಗೆ ನಡೆಯುತ್ತಿರುವ ವರ್ತಮಾನ ಕಾಲವೂ, ನಡೆದಂತಹ ಭೂತಕಾಲವೂ, ಹಾಗೆ ಮುಂಬರುವ ಭವಿಷ್ಯತ್ ಕಾಲದಲ್ಲಿನ ಸಮಾಚಾರ ನನಗೆ ತಿಳಿದಿದೆ. ತ್ರಿಕಾಲಗಳು ತಿಳಿದ ನಾನು ಹೇಗಿರುವುದು ಯಾರಿಗೂ ತಿಳಿದಿಲ್ಲ.

ಇಷ್ಟೇ ಅಲ್ಲದೆ ರಾಜವಿದ್ಯಾ ರಾಜಗುಹ್ಯ ಯೋಗವೆಂಬ ಅಧ್ಯಾಯದಲ್ಲಿ ನಾಲ್ಕನೇ ಶ್ಲೋಕದಲ್ಲಿ ಒಂದು ವಾಕ್ಯ. "ಮಯಾತತ ಮಿದಂ ಸರ್ವಂ ಜಗದವ್ಯಕ್ತ ಮೂರ್ತಿನಾ" ಎಂದು ಇದೆ. ಇದರ ಭಾವ "ನಾನು ಇಂದ್ರಿಯಗಳಿಗೆ ಅಗೋಚರನಾಗಿದ್ದೂ, ಈ ಪ್ರಪಂಚವೆಲ್ಲವನ್ನು ವ್ಯಾಪಿಸಿದ್ದೇನೆ." ಈ ಮಾತು ಗಳೆಲ್ಲವೂ ಸ್ವತಃ ಭಗವಂತನು ಹೇಳಿದ ಮಾತಗಳು. ಆದ್ದರಿಂದ ಇವೆಲ್ಲವೂ ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಸಂಬಂಧಿಸಿರುವುದಾಗಿ ಲೆಕ್ಕಿಸುತ್ತಿದ್ದೇವೆ. ನಾನು ಯಾವ ಇಂದ್ರಿಯಗಳಿಗೂ ತಿಳಿಯವುದಿಲ್ಲ, ನನ್ನನ್ನು ಯಾರು ನೋಡಲಾರರು ಎಂದು ದೇವರು ಹೇಳಿದ ಮಾತುಗಳನ್ನು ಅತಿಕ್ರಮಿಸಿ, ನಾನು ನೋಡಿದ್ದೇನೆ ಎಂದು ಯಾರಾದರೂ ಅಂದರೆ, ಅವನು ಅಶಾಸ್ತ್ರೀಯವಾಗಿ ದೇವರ ಧರ್ಮಗಳಿಗೆ ವಿರುದ್ಧವಾಗಿ ಮಾತನಾಡಿದಂತಾಗುತ್ತದೆ. ದೇವರ ಮಾತನ್ನು ಅಲ್ಲವೆಂದವನು ಆತನನ್ನೂ, ಆತನ ಜ್ಞಾನವನ್ನು ದೂಷಿಸಿದಂತಾಗುತ್ತದೆ. ದೈವದೂಷಣೆ ಪಾಪವು ಅವನಿಗೆ ಸಂಭವಿಸುತ್ತದೆ. ದೇವರನ್ನು ನಾನು ನೋಡಿದ್ದೇನೆ, ನಾನು ಮಾತನಾಡಿದ್ದೇನೆ ಅಂದವರು ಯಾರಾದರಾಗಲಿ, ಸ್ವಾಮೀಜಿಗಳಾಗಲಿ, ದೈವಮಾರ್ಗದಲ್ಲಿ ಅಪರಾದಿಗಳಾಗುತ್ತಾರೆ, ಶಿಕ್ಷಾರ್ಹರಾಗುತ್ತಾರೆ.

ದೇವರನ್ನು ಯಾರೂ ನೋಡಲಾರರು, ಆತನು ಯಾರಜೊತೆಯೂ ಪ್ರತ್ಯಕ್ಷವಾಗಿ ಮಾತನಾಡುವುದಿಲ್ಲ ಎನ್ನುವುದಕ್ಕೆ ಖುರ್‌ಆನ್ ಗ್ರಂಥದಲ್ಲಿ ಸುರಾ6, ಆಯತ್ 103 ರಲ್ಲಿ ಹೀಗೆ ಇದೆ. "ಯಾರ ದೃಷ್ಠಿಯೂ ಸಹ ಆತನನ್ನು (ದೇವರನ್ನು) ನೋಡಲಾರವು. (ಅಲ್ಲಾಹ್‌ನನ್ನು ಯಾರೂ ನೋಡಲಾರರು) ಆತನು ಮಾತ್ರ ಎಲ್ಲರ ದೃಷ್ಠಿಯನ್ನು ಗಮನಿಸುತ್ತಾನೆ. (ಅಲ್ಲಾಹ್ ಎಲ್ಲರನ್ನು ನೋಡುತ್ತಿದ್ದಾನೆ.) ಆತನು ಸೂಕ್ಷ್ಮದೃಷ್ಠಿ ಇರುವವನು, ಸರ್ವವೂ ತಿಳಿದವನು. ಈ ವಾಕ್ಯದಲ್ಲಿ ದೇವರನ್ನು ಯಾರು ನೋಡಲಾರರಾಗಲಿ, ದೇವರು ಎಲ್ಲರನ್ನು ನೋಡುತ್ತಾನೆ ಎಂದು ಇದೆ. ಅಷ್ಟೇ ಅಲ್ಲದೆ 42ನೇ ಸುರಾದಲ್ಲಿ 51ನೇ ಆಯತ್‌ನಲ್ಲಿ ಸಹ ಹೀಗೆ ಇದೆ. "ಯಾವ ಮಾನವನೊಂದಿಗೆ ದೇವರು ಪ್ರತ್ಯಕ್ಷವಾಗಿ ಮಾತನಾಡುವುದು ಎನ್ನುವುದು ನಡೆಯುವುದಿಲ್ಲ." ಈ ವಿಧವಾಗಿ ದೇವರು ತನ್ನ ಗ್ರಂಥದಲ್ಲಿ ಹೇಳಿರುವಾಗ, ಆತನ ಮಾತುಗಳನ್ನು ಅಲ್ಲವೆಂದು, ನಾವು ನೋಡಿದ್ದೇವೆ, ನಾವು ಮಾತನಾಡಿದ್ದೇವೆ ಎಂದರೆ ಅವರು ಯಾರನ್ನು ನೋಡಿದ್ದಾರೋ? ಯಾರಜೊತೆ ಮಾತನಾಡಿದ್ದಾರೋ ಅವರಿಗೇ ತಿಳಿಯಬೇಕು. ಅವರು ನೋಡಿರುವುದು ಮಾತ್ರ ದೇವರನ್ನು ಅಲ್ಲವೆಂದು ಬ್ರಹ್ಮವಿದ್ಯಾಶಾಸ್ತ್ರವೇ ಹೇಳುತ್ತಿದೆ. ಒಬ್ಬ ಗುರುವು ನಿಮಗೆ ದೇವರನ್ನು ತೋರಿಸುತ್ತೇನೆ ಇಂತಹ ದಿನ ತನ್ನ ಹತ್ತಿರಕ್ಕೆ ಬರಲು ತನ್ನ ಶಿಷ್ಯರಿಗೆ ಹೇಳಿದನಂತೆ. ದೇವರನ್ನು ನೋಡಬೇಕೆಂದುಕೊಂಡ ಶಿಷ್ಯರೆಲ್ಲರೂ ಆ ದಿನ ಆಸಕ್ತಿಯಿಂದ ಗುರುವು ಹತ್ತಿರಕ್ಕೆ ಹೋಗಿದ್ದಾರೆ. ಆಗ ನಾನು ದೇವರನ್ನು ತೋರಿಸುತ್ತಿದ್ದೇನೆ ಜಾಗ್ರತೆಯಾಗಿ ನೋಡಿರೆಂದು ಗುರುವು ಹೇಳಿದಾಗ, ಮತ್ತಷ್ಟು ಜಾಗ್ರತೆಹೊಂದಿ ಪೂರ್ತಿ ಎಚ್ಚರಿಕೆಯಿಂದ ಶಿಷ್ಯರು ನೋಡುತ್ತಿರುವಾಗ, ತಮ್ಮ ಮಧ್ಯದಲ್ಲಿರುವ ಶೂನ್ಯವಾದ ಬಯಲನ್ನು ತೋರಿಸಿ ಇದೇ ದೇವರ ಆಕಾರ ಯಾರೂ ನೋಡದಿರುವುದು ಈಗ ನೀವು ನೋಡಿದ್ದೀರಾ ಎಂದು ಹೇಳಿದನಂತೆ. ಆಗ ಒಬ್ಬ ಶಿಷ್ಯನು ಎದ್ದು ಈ ಬಯಲನ್ನು ಪ್ರತಿ ದಿನ ನಾವು ನೋಡುತ್ತಲೇ ಇದ್ದೇವೆ. ನಾವೇ ಅಲ್ಲದೆ ನಮ್ಮ ಹಿಂದಿರುವ ನಾಯಿಗಳು, ನಮ್ಮ ಮನೆಯಲ್ಲಿರುವ ಬೆಕ್ಕುಗಳೂ ಸಹ ನೋಡುತ್ತಿವೆ ಅಂದನು. ಆಗ ಆ ಗುರುಗಳು "ಬಯಲೇ ದೇವರು, ಬಯಲು

ದೇವರೆಂದು ಇಲ್ಲಿಯವರೆಗೂ ನಿಮಗೆ ತಿಳಿದಿಲ್ಲವಲ್ಲ!" ಅಂದನಂತೆ. ಕೆಲವರು ಆತನ ಮಾತುಗಳನ್ನು ಕುರುಡರಂತೆ ನಂಬಿದ್ದಾರೆ. ಆದರೆ ಕೆಲವರು ಪ್ರಕೃತಿಯನ್ನು ತೋರಿಸಿ ಪರಮಾತ್ಮ ಎನ್ನುತ್ತಿದ್ದಾರೆ. ಪ್ರಕೃತಿಯನ್ನು ಮಾಡಿದವನು ಪರಮಾತ್ಮ. ಪ್ರಕೃತಿ ಕಾಣಿಸುತ್ತಿದೆ, ಪರಮಾತ್ಮ ಕಾಣಿಸುವುದಿಲ್ಲವೆಂದು ಬಹುಶ ಈತನಿಗೆ ತಿಳಿಯದು ಎಂದು ಅಂದುಕೊಂಡರು. ಅಲ್ಲಿಗೆ ಆ ಗುರುವನ್ನು ಬಿಟ್ಟು ನಿಜವಾದ ಜ್ಞಾನಕ್ಕೋಸ್ಕರ ಅನ್ವೇಷಣೆ ಸಾಗಿಸಿದರು.

ಈಗಿನ ಕಾಲದಲ್ಲಿ ಆಧ್ಯಾತ್ಮಿಕತೆ ಎನ್ನುವ ಹೆಸರಿದೆಯಾಗಲಿ, ಅದರಲ್ಲಿ ಆತ್ಮಾ ಇಲ್ಲ, ಅಧ್ಯಯನವೂ ಇಲ್ಲ. ನಿಮಗೆ ಅರ್ಥವಾಗುವುದಕ್ಕೆ ಚಿಕ್ಕ ಉದಾಹರಣೆಯನ್ನು ಹೇಳುತ್ತೇವೆ ನೋಡಿರಿ. ನಾನು ಚಿಕ್ಕ ವಯಸ್ಸಿನಲ್ಲಿರುವಾಗ ಮನೆಮನೆ ತಿರುಗಿ ಜ್ಯೋತಿಷ್ಯ ಹೇಳಿ ಹಣವನ್ನು ಸಂಪಾದಿಸಿಕೊಳ್ಳುವವರನ್ನು ನೋಡಿದ್ದೇನೆ. "ಎರುಕ (ಕಣೆ) ಹೇಳುತ್ತೇವೆ" ಎಂದು ಕೆಲವರು ಹೆಂಗಸರು ತಲೆಮೇಲೆ ಪುಟ್ಟಿಗಳು ಇಟ್ಟುಕೊಂಡು ಊರೆಲ್ಲಾ ತಿರುಗುತ್ತಿದ್ದರು. ಊರಿನಲ್ಲಿ ಯಾರೋ ಒಬ್ಬರು ಅಥವಾ ಕೆಲವರು ಅವರಿಂದ ಭವಿಷ್ಯತ್ತನ್ನು ಹೇಳಿಸಿ ಕೊಳ್ಳುತ್ತಿದ್ದರು. ಎರುಕ (ಕಣಿ) ಹೇಳುವವರು ಹೇಳಿಸಿಕೊಳ್ಳುವವರ ಕೈ ಹಿಡಿದು ಕೊಂಡು ದೇವತೆಗಳ ಹೆಸರುಗಳನ್ನೆಲ್ಲಾ ಹೇಳುತ್ತಾ "ಅಂಬೆ ಹೇಳು, ಜಗದಾಂಬೆ ಹೇಳು, ಕಂಚಿ ಕಾಮಾಕ್ಷಿ ಹೇಳು, ಮಧುರ ಮೀನಾಕ್ಷಿ ಹೇಳು" ಎನ್ನುತ್ತಾ ಒಂದು ಹಾಡಿನಂತೆ ದೀರ್ಘವಾಗಿ ಅವರಿಗೆ ತಿಳಿದಿರುವುದು ಅವರು ಹೇಳುತ್ತಿದ್ದರು. ಅದನ್ನು "ಎರುಕ" ಎನ್ನುತ್ತಾರೆ. ಎರುಕ (ಕಣಿ) ಅಂದರೆ ಜ್ಞಾನ ಎಂದು ಅರ್ಥಬರುತ್ತದೆ. ಆದರೆ ಆ ಪದವನ್ನು ಜ್ಯೋತಿಷ್ಯ ಎಂದು ಬಳಸುವುದು ಸರಿಯಲ್ಲ. ಆದರೆ ಪೂರ್ವದಲ್ಲಿ ಹಾಗೆಯೇ ಅನ್ನುತ್ತಿದ್ದರು. ಪೂರ್ವದಲ್ಲಿ ಎರುಕದವರು ಎರುಕ ಹೇಳುವುದು ಒಂದು ವಿಧವಾದ ಜ್ಯೋತಿಷ್ಯವಾಗಿದ್ದು, ಚಿಕ್ಕ ಪಂಜರದಲ್ಲಿ ಗಿಳಿಯನ್ನು ಇಟ್ಟುಕೊಂಡು ಊರೆಲ್ಲಾ ತಿರುಗಿ ಗಿಳಿಯಹತ್ತಿರ ಜ್ಯೋತಿಷ್ಯ ಹೇಳುವವರನ್ನು ನೋಡಿದ್ದೇವೆ. ಇನ್ನು ಒಂದು ಪುಸ್ತಕದೊಳಗೆ ಒಂದು ಕಡ್ಡಿಯನ್ನು ಇಟ್ಟು ಯಾವ ಪುಟ ತೆರೆದುಕೊಂಡರೆ ಆ ಪುಟದಲ್ಲಿರುವ

ವಿಷಯವನ್ನು ಓದಿ ಹೇಳುವವರನ್ನು ನೋಡಿದ್ದೇನೆ. ಅದು ಸಹ ಒಂದು ವಿಧವಾದ ಜ್ಯೋತಿಷ್ಯವೇ. ಇನ್ನು ಬಿಳಿಯ ಕವಡೆಗಳನ್ನು ಕೆಳಗೆಹಾಕಿ ಅವು ಎಷ್ಟು ಬಾರಲುಬಿದ್ದಿವೆ, ಎಷ್ಟು ಅಂಗಾತ ಬಿದ್ದಿವೆ ಎಂದು ನೋಡಿ ಅವುಗಳಿಂದ ಜ್ಯೋತಿಷ್ಯವನ್ನು ಹೇಳುವವರನ್ನೂ ಸಹ ನೋಡಿದ್ದೇವೆ. ಕೆಲವರು ಪಂಚಾಂಗವನ್ನು ನೋಡಿ ಜ್ಯೋತಿಷ್ಯವನ್ನು ಹೇಳುವವರನ್ನು ಸಹ ನೋಡಿದ್ದೇವೆ. ಕೆಲವರು ಸಂಖ್ಯಾಶಾಸ್ತ್ರ ಎಂದು ಹೆಸರಿಟ್ಟು ಮನುಷ್ಯನ ಹೆಸರಿನಲ್ಲಿನ ಅಂಕೆಗಳನ್ನನುಸರಿಸಿ ಜ್ಯೋತಿಷ್ಯವನ್ನು ಹೇಳುವವರೂ ಸಹ ಇದ್ದಾರೆ. ಈ ವಿಧವಾಗಿ ಹೇಳುತ್ತಾಹೋದರೆ ಸಮಾಜದಲ್ಲಿ ಎಷ್ಟೋ ವಿಧಗಳ ಜ್ಯೋತಿಷ್ಯಗಳು ಪ್ರಬಲವಾಗಿವೆ. ಇವುಗಳಲ್ಲಿ ಶಾಸ್ತ್ರೀಯತೆ ಇರುವುದು ಯಾವುದೋ ಒಂದು ನಿಜವಾದ ಜ್ಯೋತಿಷ್ಯವಾಗುತ್ತದೆ ಆದರೆ, ಶಾಸ್ತ್ರೀಯತೆ ಇಲ್ಲದಿರುವುದು ಜ್ಯೋತಿಷ್ಯ ಅಲ್ಲವೆಂದು ಹೇಳಬಹುದು. ಶಾಸ್ತ್ರೀಯತೆ ಇಲ್ಲದ ಜ್ಯೋತಿಷ್ಯವು ಹೆಸರಿಗೆ ಜ್ಯೋತಿಷ್ಯ ವಾಗುತ್ತದಾಗಲಿ, ಅದರಲ್ಲಿ ಸತ್ಯ ಸ್ವಲ್ಪವೂ ಸಹ ಇರುವುದಿಲ್ಲ. ಅಂತಹವುಗಳನ್ನೆಲ್ಲ ಮೂಢ ನಂಬಿಕೆಯಿಂದ ಕೂಡಿಕೊಂಡಿವೆ ಎಂದು ಹೇಳಬಹುದು.

ಅದೇ ವಿಧವಾಗಿ "ಆಧ್ಯಾತ್ಮಿಕವೂ ಸಹ ಅನೇಕ ವಿಧಗಳಾಗಿ ಪ್ರಜೆಗಳಿಗೆ ಬೋಧಿಸಲ್ಪಡುತ್ತಿದೆ. ಎರುಕ ಜ್ಯೋತಿಷ್ಯ, ಕಡ್ಡಿ ಜ್ಯೋತಿಷ್ಯ, ಕವಡೆಗಳ ಜ್ಯೋತಿಷ್ಯ, ಗಿಳಿ ಜ್ಯೋತಿಷ್ಯ ಎಂದು ಅನೇಕ ವಿಧಗಳ ಜ್ಯೋತಿಷ್ಯಗಳು ಅಶಾಸ್ತ್ರೀಯವಾಗಿ ಹೇಗೆ ವ್ಯಾಪಿಸಿವೆಯೋ, ಅದೇ ವಿಧವಾಗಿ ಈಗಿನ ಕಾಲದಲ್ಲಿ ಪ್ರಜೆಗಳಿಗೆ ಅನೇಕ ಪದ್ಧತಿಗಳಾಗಿ ಆಧ್ಯಾತ್ಮಿಕ ಹೇಳಲಾಗುತ್ತಿದೆ. ಯಾವ ವಿಧವಾಗಿ ಅನೇಕ ವಿಧಗಳ ಜ್ಯೋತಿಷ್ಯರಿದ್ದಾರೋ, ಅದೇ ವಿಧವಾಗಿ ಅನೇಕ ವಿಧ ಆಧ್ಯಾತ್ಮಿಕ ಬೋಧಕರು ಸಹ ಇದ್ದಾರೆ. ಜ್ಯೋತಿಷ್ಯಗಳು ಎಷ್ಟು ಇದ್ದರೂ ಅವು ಹೇಗೆ ಶಾಸ್ತ್ರಬದ್ಧವಲ್ಲದೆ ಅಸತ್ಯವಾಗಿವೆಯೋ, ಹಾಗೆ ಇಂದಿನ ಅನೇಕ ವಿಧ ಆಧ್ಯಾತ್ಮಿಕ ಬೋಧನೆಗಳು ಯಾವ ಶಾಸ್ತ್ರೀಯತೆ ಇಲ್ಲದಿರುವವಾಗಿ ಹೋಗಿವೆ. ಜ್ಯೋತಿಷ್ಯ ಹತ್ತು ಅಥವಾ ಹದಿನೈದು ವಿಧಗಳಾಗಿದ್ದರೆ, ಆಧ್ಯಾತ್ಮಿಕ ಮಾತ್ರ ಸುಮಾರು ಎರಡು ಮೂರುನೂರು ವಿಧಗಳಾಗಿ ಇವೆಯೆಂದು ಹೇಳಬಹುದು. ಇಷ್ಟು

ನೂರು ವಿಧಗಳಲ್ಲಿ ಪೂರ್ತಿ ಶಾಸ್ತ್ರೀಯವಾದುದು ದೀಪವಿಟ್ಟು ಹುಡಿಕಿದರೂ ಕಾಣಿಸದಂತೆ ಹೋಗಿದೆ. ಆದರೂ ಮನುಷ್ಯ ಬೋಧಕರ ಹಿಂದೆ ಬೀಳುತ್ತಲೇ ಇದ್ದಾನೆ, ಬೋಧಕರು ಅವರವರ ಬೋಧನೆಗಳನ್ನು ಹೇಳುತ್ತಲೇ ಇದ್ದಾರೆ. ಈ ವಿಧವಾಗಿ ಇಂದಿನ ಆಧ್ಯಾತ್ಮಿಕ ದಾರಿತಪ್ಪಿ ನಡೆಯುತ್ತಿದೆ. ಇಷ್ಟುಜನ ಬೋಧಕರಲ್ಲಿ ನನ್ನ ಬೋಧನೆ ಉತ್ತಮವಾದುದು ಎಂದು ಒಬ್ಬರನ್ನುತ್ತಿದ್ದರೇ, ಇಲ್ಲ ಎಲ್ಲದಕ್ಕಿಂತ ನನ್ನ ಬೋಧನೆ ಉತ್ತಮವಾದುದು ಎಂದು ಮತ್ತೊಬ್ಬ ರನ್ನುತ್ತಿದ್ದಾರೆ. ಈ ವಿಧವಾಗಿ ನಾನು ದೊಡ್ಡವನು, ನನ್ನ ಬೋಧನೆ ದೊಡ್ಡದು ಎನ್ನುತ್ತಾ ಬೋಧಕರೆಲ್ಲರೂ ದೇಶದಲ್ಲಿ ಹಣಕ್ಕೋಸ್ಕರ, ಹೆಸರು ಪ್ರಖ್ಯಾತಿಗೋಸ್ಕರ ಅಲೆದಾಡುತ್ತಿದ್ದಾರೆ ಹೊರತು ದೇವರ ಜ್ಞಾನಕೋಸ್ಕರ ಸ್ವಲ್ಪವೂ ಕನಿಷ್ಠ ಪ್ರಯತ್ನವೂ ಸಹ ಮಾಡಲಿಲ್ಲವೆಂದು ಅರ್ಥವಾಗುತ್ತಿದೆ. ಕೆಲವರ ದೃಷ್ಟಿಯಲ್ಲಿ ಆಧ್ಯಾತ್ಮಿಕ ಬೋಧನೆ ಒಂದು ವ್ಯಾಪಾರದಂತೆ ಬದಲಾಗಿಹೋಗಿದೆ. ಆಧ್ಯಾತ್ಮಿಕ ಪವಿತ್ರ ವಾದುದು ಎಂದು, ಶಕ್ತಿಯಿಂದ ಕೂಡಿಕೊಂಡಿರುತ್ತದೆ ಎಂದು ಬೋಧಕರು ಸಹ ಅಂದುಕೊಳ್ಳುವುದಿಲ್ಲ. ಇದೆಲ್ಲಾ ನನ್ನ ಅನುಭವದಿಂದ ಹೇಳುತ್ತಿದ್ದೇನೆ. ನನ್ನ ಅನುಭವವೇನೋ ಕೆಳಗೆ ಬರೆಯುತ್ತಿದ್ದೇನೆ ನೋಡಿ.

ಸುಮಾರು ಮೂವತ್ತು ವರ್ಷಗಳ ಕೆಳಗೆ ನಾನು ಕರ್ನೂಲ್ ಜಿಲ್ಲೆಯಲ್ಲಿ ಒಬ್ಬ ಸ್ವಾಮೀಜಿಯನ್ನು ಬೇಟಿಮಾಡಿದೆನು. ನಾನು ಯಾವ ಗುರುತಿಲ್ಲದ ಸಾಧಾರಣ ವ್ಯಕ್ತಿಯಾಗಿ ಆತನನ್ನು ಬೇಟಿಯಾದೆನು. ಆಗಿನ ಕಾಲದಲ್ಲಿ ಆತನು ಚೆನ್ನಾಗಿ ಉಪನ್ಯಾಸಗಳನ್ನು ಹೇಳಿ ಒಳ್ಳೆಯ ಹೆಸರು ತಂದುಕೊಂಡಿದ್ದಾನೆ. ಆತನ ಹೆಸರನ್ನು ಸ್ವಲ್ಪ ಬದಲಾಯಿಸಿ ಹೇಳಿದರೆ ಪ್ರನಾಧ ಚೈತನ್ಯ ಸ್ವಾಮಿ. ಆಗಿನಕಾಲದಲ್ಲಿ ಹಿಂದೂಮತ ರಕ್ಷಣ ಸಂಘಗಳೆಲ್ಲಾ ಆತನನ್ನು ದೊಡ್ಡದಾಗಿ ಹೊಗಳುತ್ತಿದ್ದವು. ಏಕೆಂದರೆ ಆ ಸ್ವಾಮೀಜೀ ಹಿಂದೂ ಮತವನ್ನು ದೊಡ್ಡದಾಗಿ ಹೇಳುತ್ತಾ ಇಸ್ಲಾಮ್ ಮತವನ್ನು, ಕ್ರೈಸ್ತ ಮತವನ್ನೂ ಹೆಚ್ಚಾಗಿ ದೂಷಿಸುವುದು ವಿಮರ್ಶಿಸುವುದು ಮಾಡುತ್ತಿದ್ದನು. ಆಗಿನಕಾಲದಲ್ಲಿ ಧೈರ್ಯವಾಗಿ ಮಾತನಾಡುವ ಸ್ವಾಮಿ ಎಂದು ಬಹಳಜನ ಆತನನ್ನು ಹೊಗಳುತ್ತಿದ್ದರು. ಆ ಸ್ವಾಮಿ ಹತ್ತಿರ

ಒಂದು ದಿನವೆಲ್ಲ ಕಳೆದಿದ್ದೇನೆ. ರಾತ್ರಿ ಊಟ ಮಾಡಿದ ನಂತರ 8 ಗಂಟೆಗಳಿಂದ 2 ಗಂಟೆಗಳವರೆಗೂ ಅಂದರೆ ಆರು ಗಂಟೆಗಳ ಸಮಯ ಕುಳಿತುಕೊಂಡವರು ಮೇಲೇಳದಂತೆ ಮಾತನಾಡಿದ್ದೇವೆ. ನಾನು ಎಷ್ಟೋ ಪ್ರಶ್ನೆಗಳನ್ನು ಕೇಳುತ್ತಾ ಬಂದಿದ್ದೇನೆ. ಆತನು ಪುರಾಣಗಳನ್ನೂ, ಇತಿಹಾಸಗಳನ್ನು ಬಳಸಿಕೊಳ್ಳುತ್ತಾ ಒಂದೊಂದುಸಲ ಭಗವದ್ಗೀತೆಯನ್ನು, ಉಪನಿಷತ್ತಗಳನ್ನು ಬಳಸಿಕೊಳ್ಳುತ್ತಾ ಉತ್ತರಗಳು ಹೇಳುತ್ತಾ ಬಂದಿದ್ದಾನೆ. ಹಾಗೆ ಹೇಳುವುದರಲ್ಲಿ ಕೆಲವು ವಿಷಯಗಳನ್ನು, ಮೊದಲು ಒಂದು ವಿಧವಾಗಿ ಹೇಳಿ ಅವುಗಳನ್ನೇ ನಂತರ ಇನ್ನೊಂದು ವಿಧವಾಗಿ ಹೇಳಬೇಕಾಗಿ ಬಂದಿದೆ. ಹಾಗೆ ಮೊದಲು ಆತನೇ ಹೌದು ಎಂದು ಹೇಳಿದ ಮಾತುಗಳನ್ನು ಕೊನೆಗೆ ಆತನೇ ಸಂದರ್ಭನೋಡಿ ಅಲ್ಲವೆಂದು ಹೇಳಬೇಕಾಗಿ ಬಂದಿತು. ಕೊನೆಗೆ ಆತನಿಗೆ ತಾನು ಒಂದೇ ವಿಷಯವನ್ನು ಎರಡು ವಿಧಗಳಾಗಿ ಮಾತನಾಡಿದ್ದೇನೆಂದು ಅರ್ಥವಾಗಿದೆ. ಅದೇ ವಿಷಯವನ್ನೇ ನಾನೂ ಸಹ 'ಆಗೇನೋ ಹಾಗೆ ಹೇಳಿದ್ದೀರಾ ಕೊನೆಗೆ ಈಗ ಹೀಗೆ ಹೇಳುತ್ತಿದ್ದೀರ' ಎಂದು ಕೇಳಿದೆನು. ಅದಕ್ಕೆ ಆತನು ಆಶ್ಚರ್ಯಕರವಾದ ವಿಷಯವನ್ನು ಹೇಳಿದನು. ಅದೇನೆಂದರೆ! "ಕೆಲವು ಕಡೆ ಹಾಗೆಯೇ ಮಾತನಾಡಬೇಕಾಗಿ ಬರುತ್ತದೆ. ಹಾಗೆ ಮಾತನಾಡಿದರೇನೇ ಪ್ರಜೆಗಳಿಗೆ ಸಂತೋಷ, ಹಾಗೆ ಮಾತನಾಡದೆಹೋದರೆ ಅವರಿಗೆ ನಾವು ಇಷ್ಟವಾಗುವುದಿಲ್ಲ." ಎಂದನು. ಆಗ ನಾನು "ಪ್ರಪಂಚ ವಿಷಯಗಳನ್ನಾದರೆ ಹೇಗೆ ಬದಲಿಸಿ ಮಾತನಾಡಿದರೂ ಪರವಾಗಿಲ್ಲ. ಇದು ದೇವರ ವಿಷಯವಲ್ಲವೇ ಶಾಸ್ತ್ರಬದ್ಧವಾಗಿ ಎಂದಿಗೂ ಒಂದೇಯಾಗಿರುತ್ತದಲ್ಲವೆ! ಅಂತಹದರಲ್ಲಿ ಒಂದುಸಲ ಒಂದು ವಿಧವಾಗಿ, ಮತ್ತೊಂದುಸಲ ಇನ್ನೊಂದು ವಿಧ ಹೇಳಿದರೆ ದೇವರ ಜ್ಞಾನವನ್ನು ಸ್ಥಗಿತಮಾಡಿದಂತೆ ಅಲ್ಲವೆ." ಎಂದು ಕೇಳಿದೆವು. ಅದಕ್ಕೆ ಉತ್ತರವಾಗಿ ಆತನು "ನಾನು ಏನು ಬಚ್ಚಿಡದಂತೆ ಇರುವ ಸತ್ಯವನ್ನು ಹೇಳುತ್ತೇನೆ ಕೇಳು. ನಿಜವಾಗಿ ಹೇಳಿದರೆ ದೇವರೂ ಇಲ್ಲ, ದೆವ್ವವೂ ಇಲ್ಲ. ಆ ವಿಷಯವನ್ನು ಕುರಿತು ಮಾತನಾಡಿಕೊಳ್ಳುವುದೆ ವ್ಯರ್ಥ ಪ್ರಯಾಸ" ಎಂದು ನಗುತ್ತಾ ಹೇಳಿದನು.

ಆಗ ನನಗೆ ಪೂರ್ತಿ ಆಶ್ಚರ್ಯವಾಗಿ "ನೀವು ಸಮಾಜದಲ್ಲಿ ಹೆಸರಿರುವ ಸ್ವಾಮೀಜಿಯಾಗಿ ಇದ್ದೀರಾ. ಎಷ್ಟೋ ಊರುಗಳಲ್ಲಿ ದೊಡ್ಡ ದೊಡ್ಡ ಸಭೆಗಳಲ್ಲಿ ವಾರ ದಿನಗಳು ಪ್ರವಚನೆ ಮಾಡಿ ಒಳ್ಳೆಯ ಹೆಸರು ತಂದುಕೊಂಡಿದ್ದೀರಾ. ದೇವರನ್ನು ಕುರಿತು, ದೈವಜ್ಞಾನವನ್ನು ಕುರಿತು ಎಷ್ಟೋ ಉಪಮಾನಗಳನ್ನು ಹೇಳಿ ಪಾಮರರಿಗೂ ಸಹ ಅರ್ಥವಾಗುವಂತೆ ಬೋಧಿಸಿದ್ದೀರಾ. ಅಂತಹ ನೀವೇ ದೇವರು ಇಲ್ಲ, ದೆವ್ವವೂ ಇಲ್ಲ ಎನ್ನುವುದು ನನಗೆ ಆಶ್ಚರ್ಯವಾಗಿ ಇದೆ. ದೇವರು ಇಲ್ಲದಿರುವಾಗ, ಆ ವಿಷಯ ನಿಮಗೆ ತಿಳಿದಾಗ, ನೀವು ಕಾಷಾಯಗಳನ್ನು ಧರಿಸಿ ಸ್ವಾಮೀಜಿಯಾಗಿ ಇದ್ದು ಹಾಗೆ ಏಕೆ ಬೋಧಿ ಸಬೇಕು? ಎಂದು ಕೇಳಿದೆನು.

ಆಗ ಆತನು ಮತ್ತೊಂದು ಆಶ್ಚರ್ಯಕರವಾದ ವಿಷಯವನ್ನು ಸುನ್ನಿತವಾಗಿ ಸ್ವಲ್ಪವೂ ತಡಬಡಿಸದೆ ಈ ವಿಧವಾಗಿ ಹೇಳಿದನು. "ನಾನು ಪ್ರಜೆಗಳಿಗೋಸ್ಕರ ಹೇಳಿದ್ದೇನೆ. ನನಗೋಸ್ಕರ ಅಲ್ಲ. ನನಗೆ ದೇವರಿದ್ದಾನೆಂಬ ನಂಬಿಕೆ ಇಲ್ಲ. ಪ್ರಜೆಗಳಿಗೆ ದೇವರ ಮೇಲೆ ನಂಬಿಕೆ ಇದೆ. ಆದ್ದರಿಂದ ಅವರಿಗೋಸ್ಕರ ಹೇಳಿದ್ದೇನೆ. ವಾರಕ್ಕೆ ಲಕ್ಷರೂಪಾಯಿಗಳು ಹಣಕೊಟ್ಟು ನಮಗೆ ದೇವರ ಜ್ಞಾನವನ್ನು ಕುರಿತು ಪ್ರವಚನಗಳನ್ನು ಹೇಳಿರೆಂದು ಕೇಳಿದರು. ಆದ್ದರಿಂದ ನಾನು ಹಣ ತೆಗೆದುಕೊಂಡಿರುವುದಕ್ಕೆ ಹೇಳಿದ್ದೇನೆ. ಅವರಿಗೆ ಪ್ರವಚನಗಳು ಬೇಕು, ನನಗೆ ಹಣ ಬೇಕು. ಆದ್ದರಿಂದ ನನಗೆ ದೇವರು ಇಲ್ಲವೆಂದು ತಿಳಿದರೂ, ಅವರಿಗೆ ಇದ್ದಾನೆಂದು ಹೇಳುವುದು ಅಗತ್ಯ. ಆದ್ದರಿಂದ ಅವರಿಗೆ ಯಾವ ವಿಧದಲ್ಲಿ ಇಷ್ಟವಾದರೆ ಆ ವಿಧವಾಗಿ ಹೇಳುತ್ತೇನೆ. ಸಿನಿಮಾದಲ್ಲಿ ಯನ್.ಟಿ.ರಾಮಾರಾವು ರಾಮನ ಅಥವಾ ಕೃಷ್ಣನ ವೇಷ ಹಾಕಿ ಪಾತ್ರಕ್ಕೆ ತಕ್ಕಂತೆ ನಟಿಸುತ್ತಾನೆ. ವಾಸ್ತವವಾಗಿ ಆತನು ರಾಮನಾಗಲಿ, ಕೃಷ್ಣನಾಗಲಿ ಅಲ್ಲ ಅಲ್ಲವೆ! ನಟಿಸುವುದಕ್ಕೆ ಪ್ರತಿ ಫಲವಾಗಿ ಹಣವನ್ನು ತೆಗೆದುಕೊಳ್ಳುತ್ತಿದ್ದಾನಲ್ಲವೆ! ರಾಮನ ವೇಷ ಹಾಕಿದವನು ರಾಮನೇ ಆಗಿರಬೇಕಾದ ಕೆಲಸವಿಲ್ಲ ಅಲ್ಲವೆ! ಹಾಗೆಯೇ ದೇವರ ಉಪನ್ಯಾಸ ಹೇಳಿದ್ದೇನೆ. ಹೇಳಿದಷ್ಟು ಮಾತ್ರಕ್ಕೆ ನಿಜವಾಗಲು

ಸ್ವಾಮಿಯೋ ಇಲ್ಲವೆ ಭಕ್ತನೋ ಆಗಿರಬೇಕಾದ ಕೆಲಸವಿಲ್ಲ. ಈಗ ಭಕ್ತಿ ಜ್ಞಾನವನ್ನು ಕುರಿತು ಉಪನ್ಯಾಸಗಳು ಹೇಳುವವರಿಗೆಲ್ಲಾ ನಿಜವಾಗಲೂ ದೇವರ ಮೇಲೆ ಭಕ್ತಿ ಇದೆ ಎಂದುಕೊಳ್ಳುವುದು ತಪ್ಪು" ಅಂದನು. ಇದೆಲ್ಲವೂ ಕೇಳಿದ ನಾನು ಸ್ವಲ್ಪ ಆಶ್ಚರ್ಯಪಟ್ಟರೂ, ಇರುವುದು ಇದ್ದಂತೆ ಹೇಳಿರುವುದಕ್ಕೆ ಒಂದು ವಿಧವಾಗಿ ಆತನನ್ನು ಹೊಗಳಬೇಕಾಗಿದ್ದೇ ಎಂದುಕೊಂಡೆನು.

ಆಧ್ಯಾತ್ಮಿಕ ಎನ್ನುವುದು ಉನ್ನತ ಪದವೇ ಆದರೂ ಅದರಲ್ಲಿ ಆತ್ಮವಾಗಲಿ, ಅಧ್ಯಾಯನವಾಗಲಿ ಇಲ್ಲವೆಂದು ಹೇಳಿಕೊಂಡಿದ್ದೇವಲ್ಲವೆ! ಈದಿನ ಜ್ಯೋತಿಷ್ಯ ಎನ್ನುವುದು ಕೆಲವು ವಿಧಗಳೇ ಆದರೆ, ಆಧ್ಯಾತ್ಮಿಕ ಎನ್ನುವ ಹೆಸರಿರುವುದು ಅನೇಕ ವಿಧಗಳಾಗಿ ಇದೆಯೆಂದು ಸಹ ಹೇಳಿಕೊಂಡಿದ್ದೇವೆ. ಒಬ್ಬ ಗುರುವೇನೋ ನಾಸಿಕಾಗ್ರದ ಮೇಲೆ ಧ್ಯಾಸ ನಿಲ್ಲಿಸಬೇಕೆನ್ನುತ್ತಾನೆ. ಮತ್ತೊಬ್ಬ ಗುರುವೇನೋ ಮೂಗಿನ ಮೇಲೆ ಅಲ್ಲ, ಅದರ ಅಗ್ರದ ಮೇಲೆ ಅಷ್ಟಕ್ಕೂ ಅಲ್ಲ. ಮೂಗಿನೊಳಗೆ ಶ್ವಾಸದಮೇಲೆ ಧ್ಯಾಸವನ್ನು ಇಡಬೇಕೆನ್ನುತ್ತಾನೆ. ಒಬ್ಬ ಗುರುವೇನೋ ಮೂಗಿನ ಮೇಲೆ ಬೇಡ ಶ್ವಾಸದ ಮೇಲೆ ಬೇಡ, ಮನಸ್ಸಿನ ಮೇಲೆ ಇಟ್ಟುಕೋ ಎನ್ನುತ್ತಾನೆ. ಮತ್ತೊಬ್ಬ ಗುರುವೇನೋ "ಮನಸ್ಸು ಎಲ್ಲಿರುವುದು, ಹೇಗಿರುವುದು ತಿಳಿದಿಲ್ಲ. ಅದು ಎಲ್ಲಿರುವುದು ತಿಳಿಯದಿರುವಾಗ ಅದರಮೇಲೆ ಧ್ಯಾಸ ಹೇಗೆ ಇಡುತ್ತೀಯ? ಅವರು ಹೇಳಿರುವುದೆಲ್ಲಾ ಅಸತ್ಯ, ನಾನು ಹೇಳುವುದು ಮಾತ್ರವೇ ಸತ್ಯ. ನಿನ್ನ ಧ್ಯಾಸವನ್ನು ಭೃಮಧ್ಯ ಸ್ಥಾನದಲ್ಲಿ ಇಡು"ಎಂದು ಹೇಳುತ್ತಿದ್ದಾರೆ. ಮತ್ತೊಬ್ಬ ಗುರುವೇನೋ ನಾನು ಮಂತ್ರೋಪದೇಶವನ್ನು ಕೊಡುತ್ತೇನೆ, ಅದನ್ನು ನಿತ್ಯ ಸ್ವಲ್ಪ ಸಮಯ ಧ್ಯಾನಿಸಿಕೊಳ್ಳುತ್ತಾ ಇರು, ಅದರಿಂದ ಜನ್ಮಗಳು ಇಲ್ಲದಂತೆ ಹೋಗುತ್ತವೆ ಎನ್ನುತ್ತಿದ್ದಾನೆ. ಬ್ರಹ್ಮಕುಮಾರಿ ಸಮಾಜದವರು ಓಂಶಾಂತಿ ಎನ್ನುತ್ತಾರೆ. ಶಿವನು ದುಂಡನೆಯ ಕೆಂಪು ಪ್ರಕಾಶವಾಗಿ ಇದ್ದಾನೆನ್ನುತ್ತಾರೆ. ಪಿರಮಿಡ್‌ನವರು ಪಿರಮಿಡ್‌ನಲ್ಲಿ ಧ್ಯಾನಮಾಡು ಎನ್ನುತ್ತಾರೆ. ರಾಮಕೃಷ್ಣ ಪರಮಹಂಸ ಮಠದವರು ಎಲ್ಲಾ ಕಾಳಿಮಾತೆಯೇ ಎನ್ನುತ್ತಾರೆ. ಬಾಬಾಗ ಳಾಗಿರುವವರೇನೋ ಬೇರೆ ಧ್ಯಾನಬೇಡ, ಬೇರೆ ಧ್ಯಾಸಬೇಡ ನಾನೇ ದೇವರು

ಎನ್ನುತ್ತಿದ್ದಾರೆ. ಕೆಲವರು ಸ್ವಾಮೀಜಿಗಳೇನೋ ನನ್ನನ್ನು ತಾಕಿದರೇ ನಿಮಗೆ ಮೋಕ್ಷಬರುತ್ತದೆ ಎನ್ನುತ್ತಿದ್ದಾರೆ. ಕೆಲವರೇನೋ ದೇವರು ನಗ್ನವಾಗಿ ಹುಟ್ಟಿಸಿದರೆ ಪುನಃ ದೇವರ ಹತ್ತಿರಕ್ಕೆ ಹೋಗುವುದಕ್ಕೆ ನಗ್ನವಾಗಿಯೇ ಇರಬೇಕೆನ್ನುತ್ತಾರೆ. ಹೀಗೆ ಹೇಳಿಕೊಳ್ಳುತ್ತಾ ಹೋದರೆ ನೂರಾರೂ ವಿಧಾನಗಳು ಭಕ್ತಿ, ಧ್ಯಾನ, ಯೋಗ, ದೀಕ್ಷೆ, ಉಪಾಸನೆ ಎನ್ನುವ ಹೆಸರಿನಿಂದ ಇದ್ದೂ ಒಂದೊಂದರಲ್ಲಿ ಎಷ್ಟೋ ಮಾರ್ಗಗಳು ಹೊಂದಿವೆ. ಒಬ್ಬೊಬ್ಬ ಗುರುವು ಒಂದೊಂದು ವಿಧಾನವನ್ನು ಬೋಧಿಸುತ್ತಾ ಆಧ್ಯಾತ್ಮಿಕ ಎನ್ನುವುದನ್ನು ಹೊತ್ತುವೇಳೆ ಇಲ್ಲದಂತೆ, ಇಷ್ಟಾರಾಜ್ಯವಾಗಿ ಮಾಡಿದ್ದಾರೆ. ಯಾರಿಗೆ ತೋಚಿರುವುದು ಅವರು ಹೇಳುತ್ತಾ ಇದೇ ನಿಜವಾದ ಜ್ಞಾನವೆನ್ನುತ್ತಿದ್ದಾರೆ.

ಎಷ್ಟೋ ವಿಧಗಳಾಗಿರುವ ಆಧ್ಯಾತ್ಮಿಕವನ್ನು ನೋಡಿ ಕೆಲವರು ಯಾವ ಕಡೆ ಹೋಗದಂತೆ ದೇವರ ಜ್ಞಾನವನ್ನೇ ನಂಬದಂತೆ ಹೋಗಿದ್ದಾರೆ. ಕೆಲವರು ದೊರಕಿರುವುದರೊಂದಿಗೆ ತೃಪ್ತಿಹೊಂದಿ ಕುರುಡನಿಗಿಂತ ಮೆಳ್ಳಕಣ್ಣು ಮೇಲೆನ್ನುವಂತೆ, ಯಾವುದು ಇಲ್ಲದಂತೆ ಇರುವುದಕ್ಕಿಂತ, ಯಾವುದೋ ಒಂದು ಇದ್ದರೆ ಸಾಕೆಂದು ಅಂದುಕೊಂಡಿದ್ದಾರೆ. ಕೆಲವರೇನೋ ಜೀವನದಲ್ಲಿ ಒಂದುಸಲ ಯಾವುದೋ ಒಬ್ಬ ಗುರು ಹತ್ತಿರ ಉಪದೇಶ ತೆಗೆದುಕೊಂಡರೆ ಸಾಕೆಂದು ಅಂದುಕೊಳ್ಳುವವರೂ ಸಹ ಇದ್ದಾರೆ. ಹೀಗೆ ಎಷ್ಟು ವಿಧಗಳಾಗಿ ಗುರುಗಳಿದ್ದಾರೋ, ಅಷ್ಟು ವಿಧಗಳ ಶಿಷ್ಯರು ಸಹ ಇದ್ದಾರೆ. ಇನ್ನು ಹೋದರೆ ಲಕ್ಷಕ್ಕೊಬ್ಬರು ದೇವರ ಜ್ಞಾನವನ್ನು ತಿಳಿದುಕೊಳ್ಳಬೇಕೆಂಬ ಪ್ರಯತ್ನವನ್ನು ಮಾಡುತ್ತಿದ್ದಾರೆ. ದೇವರ ಮೇಲೆ ಪೂರ್ತಿ ಇಷ್ಟದಿಂದಿ, ದೇವರ ಜ್ಞಾನವನ್ನು ಸಂಪೂರ್ಣವಾಗಿ ತಿಳಿದುಕೊಳ್ಳಬೇಕೆನ್ನುವವರು ಸಹ ಲಕ್ಷಕೊಬ್ಬರು, ಹತ್ತು ಲಕ್ಷಕೊಬ್ಬರು, ಕೋಟಿಗೊಬ್ಬರು ಅಲ್ಲಲ್ಲಿ ಕಾಣಿಸುತ್ತಿದ್ದಾರೆ. ಅಂತಹವರಿಗೆ ಎಷ್ಟು ದೊಡ್ಡ ಸ್ವಾಮಿ ಹೇಳಿರುವುದಾದರೂ ಅದು ಅಶಾಸ್ತ್ರೀಯವಾದರೆ ಅದನ್ನು ಅವರು ಒಪ್ಪಿಕೊಳ್ಳುತ್ತಿಲ್ಲ. ಅದು ನಿಜವಾದ ಜ್ಞಾನ ಅಲ್ಲವೆಂದು ಅವರಿಗೆ ತಿಳಿದುಹೋಗುತ್ತಿದೆ. ಅಂತಹ ಬೋಧನೆಗಳಿಂದ ಅವರು ತೃಪ್ತಿ ಹೊಂದದೆ

ಅವರಿಗೆ ಬೇಕಾದ ಸಂಪೂರ್ಣವಾದ ಬೋಧನೆಗೋಸ್ಕರ ಅನ್ವೇಷಣೆಸಾಗಿಸುತ್ತಲೇ ಇರುತ್ತಾರೆ. ಅಂತಹ ಶ್ರದ್ಧೆ ಇರುವವರಿಗೆ ಬೇಕಾದ ಜ್ಞಾನವನ್ನು ದೇವರು ಸಿಗುವಂತೆ ಮಾಡುತ್ತಾನೆ. ದೇವರು ಮಾಡುತ್ತಾನೆ ಅಂದರೆ ದೇವರು ಸ್ವತಃ ಮಾಡುವುದಿಲ್ಲ. ದೇವರ ಜವಾಬ್ಧಾರಿಯನ್ನು ಸ್ವೀಕರಿಸಿ ಕೆಲಸ ಮಾಡುತ್ತಿರುವ ಪ್ರಕೃತಿಯೇ ಮಾಡುತ್ತಿದೆ ಎಂದು ಅರ್ಥ.

ಆಧ್ಯಾತ್ಮಿಕವು ಕೆಲವು ಸ್ವಾಮೀಜಿಗಳ ಕೈಗಳಲ್ಲಿ ನಾಟಕೀಯವಾಗಿದೆ. ಸ್ವಾಮೀಜೀಗಳು ಅಸಲಾದ ದೇವರನ್ನು ಬಿಟ್ಟು ತಾವೇ ಸ್ವತಃವಾಗಿ ದೇವರುಗಳನ್ನು ಸೃಷ್ಟಿಸುತ್ತಿದ್ದಾರೆ. ಅವರಿಗೆ ತಕ್ಕಂತೆ ಜ್ಞಾನವನ್ನೂ, ಅದಕ್ಕೆ ತಕ್ಕಂತೆ ಆಚಾರ ವ್ಯವಹಾರಗಳನ್ನು ತಯಾರು ಮಾಡುತ್ತಿದ್ದಾರೆ. ಹೀಗೆ ಯಾವುದೋ ಒಂದು ವಿಧವಾಗಿ ತಮ್ಮ ಪ್ರತ್ಯೇಕತೆಯನ್ನು ತೋರಿಸಿಕೊಳ್ಳಬೇಕೆಂದು ನೋಡುತ್ತಿದ್ದಾರೆ. ಅಂತಹ ಗುಂಪಿನಲ್ಲಿಯೇ ದೇವರು ಹೇಳದ ಮತಗಳನ್ನು ಮನುಷ್ಯ ತಯಾರು ಮಾಡಿಕೊಂಡಿದ್ದಾನೆ. ಕೆಲವರು ಸೃಷ್ಟಿಸಿದ ಕೆಲವು ಭಕ್ತಿ ವಿಧಾನಗಳೇ ಅಲ್ಲದೆ, ದೊಡ್ಡ ಗುಂಪಾಗಿ ತಯಾರಾಗುವುದಕ್ಕೆ ಮತ ವಿಧಾನಗಳನ್ನೇ ಮನುಷ್ಯ ಸೃಷ್ಟಿಸಿದ್ದಾನೆ. ಮತ ಎನ್ನುವ ಅಂಧತ್ವದಲ್ಲಿ ದೇವರ ಜ್ಞಾನವನ್ನು ಮನುಷ್ಯ ವಕ್ರೀಕರಿಸಿಕೊಂಡಿದ್ದಾನೆ. ಮನುಷ್ಯ ತನ್ನ ಮತ ಚಾಂಧಸದಿಂದ ದೇವರ ಜ್ಞಾನವನ್ನು ಅಶಾಸ್ತ್ರೀಯ ಮಾಡಿದ್ದಾನೆ. ಮನುಷ್ಯ ಹೊರಗಿನ ಸಮಾಜದಲ್ಲಿ ಕಳ್ಳತನ ಮಾಡಿದರೆ ಕೋರ್ಟು, ವಿಚಾರಣೆ, ಶಿಕ್ಷೆ ಇರುತ್ತದೆ. ಹಾಗೆಯೇ ಅತ್ಯಾಚಾರ ಮಾಡಿದರೂ, ಹತ್ಯೆ ಮಾಡಿದರೂ, ಇತರರನ್ನು ಹಿಂಸಿಸಿದರೂ ಮೊದಲಾದ ಎಂತಹ ತಪ್ಪುಮಾಡಿದರೂ ಕೋರ್ಟಿನ ಶಿಕ್ಷೆ ಇದ್ದರೆ, ನೇರವಾಗಿ ದೇವರ ವಿಷಯದಲ್ಲಿಯೇ ತಪ್ಪು ಮಾಡಿದರೆ ಕೋರ್ಟು, ವಿಚಾರಣೆ, ಶಿಕ್ಷೆ ಇರುವುದಿಲ್ಲವೆ? ಎಂದರೆ, ತಪ್ಪದೆ ಇರುತ್ತದೆಂದೇ ಹೇಳಬೇಕು. ಹೊರಗಿನ ಸಮಾಜದಲ್ಲಿ ಕೋರ್ಟಿನಲ್ಲಿ ಯಾವುದೋ ಒಂದು ಉಪಾಯದಿಂದ ಅಪರಾದವನ್ನು ಮಾಡದವ ನಾಗಿ ತಪ್ಪಿಸಿಕೊಂಡು ಹೊರಬೀಳಬಹುದಾಗಲಿ, ದೇವರ ವಿಷಯದಲ್ಲಿ ನಡೆದ ತಪ್ಪಿನಿಂದ ಯಾರೂ ತಪ್ಪಿಸಿಕೊಳ್ಳಲಾರನು. ಯಾರ ತಿಳುವಳಿಕೆಯಾಗಲಿ,

ಧನವಾಗಲಿ ಪದವಿಯಾಗಲಿ ದೇವರ ಶಿಕ್ಷೆಯಿಂದ ಹೊರಹಾಕಲಾರವು. ದೇವರ ವಿಷಯದಲ್ಲಾಗಲಿ, ದೇವರ ಜ್ಞಾನ ವಿಷಯದಲ್ಲಾಗಲಿ ತಪ್ಪು ಮಾಡಿದವನಿಗೆ ಅದರ ವಿಚಾರಣೆ ಕಾಣಿಸುವುದಿಲ್ಲ. ಶಿಕ್ಷೆಯನ್ನು ಹಾಕುವವನು ಕಾಣಿಸುವುದಿಲ್ಲ, ಶಿಕ್ಷೆ ಏನಾಗಿರುವುದು ಯಾರಿಗೂ ತಿಳಿಯದು. ಅದು ಅನುಭವಕ್ಕೆ ಬಂದಾಗಲೂ ಕೂಡಾ ಅದು ಯಾವುದರ ಮುಖಾಂತರ ಬಂದಿರುವ ಶಿಕ್ಷೆ ಎಂದು ಸಹ ತಿಳಿಯದು. ಹೊರಗಿನ ಸಮಾಜದಲ್ಲಿ ಪ್ರಪಂಚ ಸಂಬಂಧ ಅಪರಾದಗಳು ಮಾಡಿದರೆ, ಹೊರಗಿನ ಪ್ರಪಂಚದಲ್ಲಿಯೇ ಶರೀರದಿಂದಿರುವಾಗಲೇ ಅನುಭವಿಸುತ್ತಿದ್ದಾನೆ. ಹಾಗೆಯೇ ಕಾಣಿಸದ ದೇವರ ವಿಷಯದಲ್ಲಾಗಲಿ, ಜ್ಞಾನದ ಬಗ್ಗೆಯಾಗಲಿ ಮಾಡಿದ ತಪ್ಪಿಗೆ ಶಿಕ್ಷೆಯನ್ನು ಮನುಷ್ಯ ಈ ಕಾಣಿಸುವ ಪ್ರಪಂಚದಲ್ಲಿಯೇ ಅನುಭವಿಸಬೇಕಾಗಿರುತ್ತದೆ.

ಭಾರತದೇಶದಲ್ಲಿ ನಮಗೆ ಭಗವಂತನು ಐದುಸಾವಿರ ವರ್ಷಗಳ ಪೂರ್ವದಲ್ಲಿ ದೈವಜ್ಞಾನವನ್ನು ಬೋಧಿಸಿದ್ದಾನೆ. ಆ ದಿನ ಅಧರ್ಮಗಳು ವ್ಯಾಪಿಸಿ ಧರ್ಮಗಳು ತಿಳಿಯದಂತೆ ಹೋಗಿವೆಯೆಂಬ ಉದ್ದೇಶದಿಂದ ದೇವರ ಅಂಶ ಇಲ್ಲವೆ ಶಕ್ತಿ ಭಗವಂತನು ಎನ್ನುವ ವ್ಯಕ್ತಿಯಾಗಿ ಬಂದು ದೇವರ ಧರ್ಮಗಳನ್ನು ಬೋಧಿಸಿಹೋಗಿದ್ದಾನೆ. ದ್ವಾಪರಯುಗ ಅಂತ್ಯದಲ್ಲಿ ಪ್ರಪಂಚ ಸಂಬಂಧವಾಗಿ ಈಗಿರುವಷ್ಟು ಅನ್ಯಾಯಗಳು ಅಕ್ರಮಗಳು ಆ ದಿನ ಇಲ್ಲ. ಅಷ್ಟೇ ಅಲ್ಲದೆ ದೈವಜ್ಞಾನ ಸಂಬಂಧವಾಗಿ ಈದಿನ ಇರುವಷ್ಟು ಗುರುಗಳು, ಈದಿನ ಇರುವಷ್ಟು ಅನೇಕ ಭಕ್ತಿ ವಿಧಾನಗಳು, ಈ ದಿನ ಇರುವಷ್ಟು ದೇವತೆಗಳ ಗುಡಿಗಳು, ಈದಿನ ಇರುವಷ್ಟು ಸ್ವಾಮೀಜಿಗಳು, ಬಾಬಾಗಳು, ಪೀಠಾಧಿಪತಿಗಳು, ಈದಿನ ಇರುವಷ್ಟು ಉಪದೇಶಗಳು, ಈದಿನ ಇರುವಷ್ಟು ಅನೇಕ ವಿಧ ಆರಾಧನೆಗಳು ಆ ದಿನ ಇಲ್ಲವೆಂದೇ ಹೇಳಬಹುದು. ಆದರೆ ಆ ದಿನಗಳಲ್ಲಿಯೇ ಧರ್ಮ ಗಳಿಗೆ ಮುಪ್ಪು ಏರ್ಪಟ್ಟಿದೆ ಎಂದು ದೇವರು ಭಗವಂತನಾಗಿ ಬಂದು ತನ್ನ ವಿಷಯಗಳನ್ನು ತಾನೇ ಹೇಳಿಹೋಗಿದ್ದಾನೆ. ಆ ದಿನ ಎಷ್ಟೋಜನ ಮಹರ್ಷಿ ಗಳಿದ್ದರೂ ಭಗವಂತನು ಬರಬೇಕಾದ ಕೆಲಸ ಬಂದಿದೆ. ಆ ದಿನ ಅಧರ್ಮಗಳು

ಪ್ರಭಲವಾಗುವುದಕ್ಕೆ ಒಂದೇ ಒಂದು ಕಾರಣ ಇದೆ. ಕೃಷ್ಣನಿಗಿಂತ ಮೊದಲು ಹುಟ್ಟಿದ ವ್ಯಾಸನು ಮಾಡಿದ ಕೆಲಸದಿಂದ ಧರ್ಮಗಳಿಗೆ ಮುಪ್ಪು ಏರ್ಪಟ್ಟಿದೆ ಎಂದು ಹೇಳಬಹುದು.

ವ್ಯಾಸನು ಬರೆದ ನಾಲ್ಕು ವೇದಗಳು, 1108 ಉಪನಿಷತ್ತಗಳು. 18 ಪುರಾಣಗಳು ಆ ದಿನ ಪ್ರಜೆಗಳಲ್ಲಿ ಲೀನವಾಗಿ ಹೋಗಿವೆ. ಆಗಿನ ಕಾಲದಲ್ಲಿ ವಿದ್ಯಾವಂತ, ಕವಿ, ಪ್ರಜ್ಞಾಶಾಲಿ ಎಂದು ಹೆಸರುವಾಸಿಯಾದ ವ್ಯಾಸನು ಬರೆದ ಗ್ರಂಥಗಳ ಮೇಲೆ ಗೌರವವಿರುವುದರಿಂದ, ಅಂದಿನ ಕಾಲದಲ್ಲಿ ಇತರ ಗ್ರಂಥಗಳು ಯಾವವು ಇಲ್ಲದಿರುವುದರಿಂದ, ವ್ಯಾಸನ ಗ್ರಂಥಗಳನ್ನು ಎಲ್ಲರೂ ಓದಿದ್ದಾರೆ. ಹಂದಿಗಳ ರಕ್ತವನ್ನು ಹೀರಿದ ಸೊಳ್ಳೆಗಳಿಂದ ಪ್ರಜೆಗಳಿಗೆ ಮೆದಳುಬಾವು ವ್ಯಾಧಿ ಬಂದಂತೆ, ವ್ಯಾಸನು ಬರೆದ ಗ್ರಂಥಗಳಲ್ಲಿನ ಮಾಯೆ ಪ್ರಭಾವದಿಂದ ಪ್ರಜೆಗಳಲ್ಲಿ ಅಧರ್ಮಗಳು ವ್ಯಾಪಿಸಿವೆ. ವೇದಗಳು, ಪುರಾಣಗಳು, ಉಪನಿಷತ್ತಗಳು ಎಲ್ಲರಿಗೂ ಇಂದಿಗೂ ಚೆನ್ನಾಗಿ ಕಾಣಿಸುತ್ತಿವೆ, ಅವುಗಳಲ್ಲಿ ಮಾಯೆಯಿಂದ ಕೂಡಿದ ಅಧರ್ಮಗಳಿವೆ ಎಂದು ಇಂದಿಗೂ ಯಾರಿಗೂ ತಿಳಿದಿಲ್ಲ. ನಮಗೆ ತಿಳಿಯದ ವಿಷಯವನ್ನು ಗ್ರಹಿಸಿದ ದೇವರು ಭಗವಂತನ ಮೂಲಕ ತನ್ನ ಧರ್ಮಗಳನ್ನು ತಿಳಿಸಿದ್ದಾನೆ. ಆದರೂ ಭಗವಂತನು ಹೇಳಿದ ಭಗವದ್ಗೀತೆಯಲ್ಲಿ ಅಸಲಾದ ದೇವರ ಧರ್ಮಗಳಿವೆ ಎಂದು ಸಹ ಬಹಳಜನರಿಗೆ ತಿಳಿದಿಲ್ಲ. ಭಗವದ್ಗೀತೆ ಈದಿನ ಕೋರ್ಟಿನಲ್ಲಿ ಸಾಕ್ಷಿಗಳ ಹತ್ತಿರ ಸಾಕ್ಷಿ ಹೇಳುವುಕ್ಕೆ ಗ್ರಂಥವನ್ನು ಪ್ರಮಾಣ ಮಾಡುವುದಕ್ಕೆ ತೋರಿಸುತ್ತಿದ್ದಾರೆ. ಆದರೆ ಗೀತೆ ಮೇಲೆ ಪ್ರಮಾಣ ಮಾಡುವವನಿಗೆ ಭಗವದ್ಗೀತೆ ಎಂದರೆ ಏನೋ? ಭಗವದ್ಗೀತೆಯಲ್ಲಿ ಏನಿದೆಯೋ ಸಹ ತಿಳಿಯದು. ಈ ವಿಧವಾಗಿ ನೋಡಿದರೆ ವೇದಗಳು, ಉಪನಿಷತ್ತಗಳು, ಪುರಾಣಗಳು ಹರಡಿದಂತೆ ಭಗವದ್ಗೀತೆ ಹುಟ್ಟಿ ಐದುಸಾವಿರ ವರ್ಷಗಳಾದರು ಪ್ರಜೆಗಳೊಳಗೆ ಹರಡಲಿಲ್ಲವೆಂದೇ ಹೇಳಬಹುದು.

ಈ ದಿನ ಭೂಮಿ ಮೇಲಿರುವ ಸಾವಿರಾರು ಗ್ರಂಥಗಳಲ್ಲಿ ಮೊದಲು ಬಂದಿರುವುದು, ಮನುಷ್ಯ ಜೀವನಕ್ಕೆ ಅಗತ್ಯವಾದ ದೇವರ ಧರ್ಮಗಳಿರುವುದು, ಭಗವದ್ಗೀತೆ ಎಂದು ಹೇಳಬಹುದು. ನಂತರ ಅದೇ ಗುಂಪಿಗೆ ಸೇರಿ ಧರ್ಮಗಳು ಬೋಧಿಸಿರುವುದು ಭಗವದ್ಗೀತೆ ನಂತರ ಮೂರುಸಾವಿರ ವರ್ಷಗಳಿಗೆ ಬಂದಿರುವ ಬೈಬಲ್ ಗ್ರಂಥ. ಆ ನಂತರ ಆರುನೂರು ಸಂವತ್ಸರಗಳಿಗೆ ಬಂದ ಗ್ರಂಥ ಖುರಾನ್ ಗ್ರಂಥವೆಂದು ಹೇಳಬಹುದು. ಈ ಮೂರು ಗ್ರಂಥಗಳು ದೈವಜ್ಞಾನಕ್ಕೂ ಧರ್ಮಗಳಿಗೂ  ಮೂಲಗ್ರಂಥಗಳೆಂದು ಹೇಳಬಹುದು. ಮೊದಲು ಭಗವದ್ಗೀತೆ ವ್ಯಾಸನಿಂದ ಸಂಸ್ಕೃತ ಭಾಷೆಯಲ್ಲಿ ಹಿಂದಿಲಿಪಿಯಿಂದ ಬರೆಯಲ್ಪಟ್ಟಿದೆ. ನಂತರ ಬಂದಿರುವ ಬೈಬಲ್ ಹೆಬ್ರಿಭಾಷೆಯಲ್ಲಿ ಬರೆಯಲಾಗಿದೆ. ಆ ನಂತರ ಬಂದಿರುವ ಖುರ್‌ಆನ್ ಅರಬ್ಬಿ ಭಾಷೆಯಲ್ಲಿ ಬರೆಯಲಾಗಿದೆ. ಮೊದಲು ಹೇಳಿದ ಭಗವದ್ಗೀತೆ ಕೇವಲ ಐದು ಇಲ್ಲವೆ ಹತ್ತು ನಿಮಿಷಗಳಲ್ಲಿ ಹೇಳಿರುವುದೇ. ಅದು ಕೃಷ್ಣನು ಹೇಳಿದಾಗ ಅರ್ಜುನನು ಕೇಳಿ ಸ್ವಲ್ಪ ದಿನಗಳ ನಂತರ ವ್ಯಾಸನಿಗೆ ಹೇಳಿದಾಗ, ಆತನು ಕೇಳಿದ ಸಾರಾಂಶವನ್ನು ವಿಪುಲವಾಗಿ ಬಿಡಿಸಿ ಶ್ಲೋಕಗಳ ರೂಪದಲ್ಲಿ ಬರೆಯುವುದು ನಡೆದಿದೆ. ಮೊದಲು ಅರ್ಜುನನು ಕೇಳಿರುವುದು ಕೆಲವು ನಿಮಿಷಗಳ ಸಾರಾಂಶವೇ ಆಗಿರುವುದರಿಂದ ಕೇಳಿರುವುದು ಕೇಳಿದಂತೆ ವ್ಯಾಸನಿಗೆ ತಿಳಿಸುವುದು ನಡೆದಿದೆ. ಅದರಿಂದ ಕೃಷ್ಣನು ಹೇಳಿದ ಸ್ವಲ್ಪ ಸಮಾಚಾರ ಇರುವುದು ಇದ್ದಂತೆ ವ್ಯಾಸನವರೆಗೂ ಸೇರಿದೆ ಎಂದು ಹೇಳಬಹುದು. ಕೇಳಿರುವುದನ್ನು ಪೂರ್ತಿಯಾಗಿ ವ್ಯಾಸನು ಬರೆಯುವುದು ನಡೆದಿದೆ. ಅಲ್ಲಿಯವರೆಗೂ ದೇವರ ಜ್ಞಾನ ಚೆಕ್ಕುಚೆದರದಂತೆ ಶ್ಲೋಕಗಳ ರೂಪದಲ್ಲಿ ಪ್ರಜೆಗಳವರೆಗೂ ಸೇರಿದೆ. ಈ ವಿಧವಾಗಿ ಬಂದಿರುವ ಸಂಸ್ಕೃತ ಭಗವದ್ಗೀತೆಯನ್ನು ಸಂಸ್ಕೃತ ತಿಳಿದವರೆಲ್ಲರೂ ಇತರ ಭಾಷೆಯೊಳಗೆ ಅನುವಾದಿಸಿ ಬರೆಯುವುದು ನಡೆದಿದೆ. ಈಗ ನಮ್ಮವರೆಗೂ ಸಂಸ್ಕೃತ, ಕನ್ನಡ ಬಂದಿರುವವರು ಕನ್ನಡದೊಳಗೆ ಬರೆಯುವುದು ನಡೆದಿದೆ. ಹಾಗೆ ಬರೆದ ಭಗವದ್ಗೀತೆಗಳು ಕೆಲವು ಚಿಕ್ಕವು, ಕೆಲವು ದೊಡ್ಡವು, ಕೆಲವು ಮಧ್ಯತರದವು ಅನೇಕ ವಿಧಗಳು ಕಾಣಿಸುತ್ತಿವೆ.

ಸಂಸ್ಕೃತ ಭಾಷೆಯಲ್ಲಿರುವ ಗ್ರಂಥ ಒಂದೇ ಪರಿಮಾಣದಲ್ಲಿ ಇರುವಾಗ ಕನ್ನಡದೊಳಗೆ ಅನುವಾದಿಸಿರುವವು ಚಿಕ್ಕವು, ದೊಡ್ಡವು ಆಗಿವೆ ಎಂದರೆ ಅವುಗಳಲ್ಲಿ ಏನೋ ಹೆಚ್ಚುಕಡಿಮೆ ನಡೆದಿದೆ ಎಂದು ಸುಲಭವಾಗಿ ತಿಳಿದುಹೋಗುತ್ತಿದೆ. ಒಂದೇ ಶ್ಲೋಕವನ್ನೇ ಅನುವಾದಿಸಿದ ವ್ಯಕ್ತಿಯೊಂದರ ಭಾವನೆಯನ್ನನುಸರಿಸಿ ಹೆಚ್ಚಾಗಿ ಸ್ವಲ್ಪಜನ, ಕಡಿಮೆಯಾಗಿ ಸ್ವಲ್ಪಜನ ಬರೆಯುವುದು ನಡೆದಿದೆ. ಶ್ಲೋಕದಲ್ಲಿನ ಸತ್ಯ ಒಂದೇ ಆದರೂ, ಬರೆದವರ ಭಾವದೊಳಗೆ ಸೇರಿರುವವು ಕೆಲವು ಸತ್ಯಗಳು ಮತ್ತೆ ಕೆಲವು ಅಸತ್ಯಗಳಿರುವುದರಿಂದ ವ್ಯಕ್ತಿ ವ್ಯಕ್ತಿಗೂ ರಚನೆಗಳು ಉದ್ದವಾಗಿ ಚಿಕ್ಕದಾಗಿಹೋಗಿವೆ. ಆದ್ದರಿಂದ ಕೆಲವು ಚಿಕ್ಕ ಭಗವದ್ಗೀತೆಗಳು, ಕೆಲವು ದೊಡ್ಡ ಭಗವದ್ಗೀತೆಗಳು ಹೊರಗೆ ಬಂದಿವೆ. ಮೂರು ವರ್ಷಗಳ ಕೆಳಗಿನವರೆಗೂ ವಿದ್ಯಾಪ್ರಕಾಶಾನಂದಗಿರಿ ಬರೆದ 'ಗೀತಾಮಕರಂದ' ಎನ್ನುವ ಭಗವದ್ಗೀತೆ ಎಲ್ಲರ ಭಗವದ್ಗೀತೆಗಿಂತ ಬಹಳ ದೊಡ್ಡದಾಗಿ ಇರುತ್ತಿತ್ತು. ಗೀತಾಮಕರಂದ 1100 ಪುಟಗಳ ಗ್ರಂಥವಾಗಿದ್ದು, ಅದರ ನಂತರ 2000 ಪುಟಗಳ ಗ್ರಂಥವಾಗಿ ಸುಂದರ ಚೈತನ್ಯ ಸ್ವಾಮಿಗಳು ಬರೆದ 'ಚೈತನ್ಯ ಭಗವದ್ಗೀತೆ' ಇನ್ನೂ ದೊಡ್ಡದಾಗಿದೆ. 200 ಪುಟಗಳ ಭಗವದ್ಗೀತೆಗೂ, 2000 ಪುಟಗಳ ಭಗವದ್ಗೀತೆಗೂ ಶ್ಲೋಕಗಳಲ್ಲಿ ಏನೂ ವ್ಯತ್ಯಾಸ ಇರುವುದಿಲ್ಲ. ಆದರೇ ಭಾವಗಳಲ್ಲಿ ಎಷ್ಟೋ ವ್ಯತ್ಯಾಸ ಇದೆಯೆಂದು ಹೇಳಬಹುದು. ಭಗವದ್ಗೀತೆ ಶ್ಲೋಕಗಳ ವರೆಗೂ ಭಾವ ಕೆಟ್ಟುಹೋಗದಂತೆ ಇರುವುದು ಇದ್ದಂತೆ, ಉಳಿದ ರಚನಕಾರರ ಅನುವಾದದಲ್ಲಿ ಭಗವಂತನು ಹೇಳಿದ ಭಾವನೆ ಸ್ವಲ್ಪ ಬದಲಾಗಿಹೋಗಿ, ರಚನಕಾರರ ಭಾವವು ಅದರಲ್ಲಿ ಸೇರಿದೆ ಎಂದು ಹೇಳಬಹುದು. ಈ ವಿಧವಾಗಿ ಕೃಷ್ಣನು ಹೇಳಿದ ಭಾವವು ಕೆಲವು ಗೀತೆಗಳಲ್ಲಿ ಶೇಕಡ 50ರಷ್ಟು ಬದಲಾಗಿ ಹೋಗಿರುವಾಗ, ಕೆಲವುಗಳಲ್ಲಿ 60, 70, 80 ರಷ್ಟು ಸಹ ಬದಲಾಗಿಹೋಗಿದೆ ಎಂದು ಹೇಳಬಹುದು. ಕೆಲವರು ಬರೆದ ಭಗವದ್ಗೀತೆಗಳಲ್ಲಿ ಕೇವಲ 10 ರಷ್ಟು ಮಾತ್ರ ಬದಲಾವಣೆಯಾಗಿ ಶೇಕಡ 90 ರಷ್ಟು ಭಗವಂತನ ಭಾವವಿದೆ ಯೆಂದು ಹೇಳಬಹುದು. 20, 30, 40 ರಷ್ಟು ಭಾವಬದಲಾವಣೆ ನಡೆದ

ಗೀತೆಗಳನ್ನು ಸಹ ನೋಡಿದ್ದೇನೆ. ಚಿಕ್ಕ ಸೈಜಿ (ಪರಿಮಾಣದಲ್ಲಿ) ರುವ ಗ್ರಂಥಗಳಲ್ಲಿ ಹೆಚ್ಚಾಗಿ ಭಗವಂತನ ಭಾವವಿದ್ದಂತೆ ತಿಳಿಯುತ್ತದೆ. ಯಾವುದು ಏನಾದರೂ ಭಗವದ್ಗೀತೆ ಶ್ಲೋಕಗಳ ರೂಪದಲ್ಲಿ ಈ ದಿನ ಸಹ ನಮ್ಮ ಮುಂದಿರುವುದಕ್ಕೆ ಸಂತೋಷಿಸಬಹುದು. ಏಕೆಂದರೆ ರಚನಾಕಾರನ ಶರೀರದಲ್ಲಿರುವ ಆತ್ಮ ತಿಳಿಸಿದರೆ ಶೇ.100 ರಷ್ಟು ಭಗವಂತನ ಭಾವವಿರುವ ಭಗವದ್ಗೀತೆ ಹೊರಗೆ ಬರಬಹುದು, ಎಲ್ಲಿಯಾದರೂ ಈಗಾಗಲೇ ಬಂದಿರಬಹುದು.

ನನಗೆ ತಿಳಿದವರೆಗೂ ಗೀತೆಯಲ್ಲಿನ ಅಧ್ಯಾಯಗಳಲ್ಲಿ ಎರಡನೆಯದಾಗಿ ಹೇಳುವ ಸಾಂಖ್ಯಯೋಗದಲ್ಲಿ, 11, 19, 22, 23, 47 ಶ್ಲೋಕಗಳಿಗೆ ಭಗವಂತನು ಹೇಳಿದ ಭಾವದ ಪ್ರಕಾರ ಇಲ್ಲಿಯವರೆಗೂ ಯಾರೂ ಬರೆಯಲಿಲ್ಲವೆಂದು ತಿಳಿಯುತ್ತಿದೆ. ಒಂದು ಅಧ್ಯಾಯದಲ್ಲಿಯೇ ಐದು ಶ್ಲೋಕಗಳಿಗೆ ಅರ್ಥ ಇಲ್ಲವೆಂದರೆ ಗೀತೆಯಲ್ಲಿ ಎಷ್ಟು ಶ್ಲೋಕಗಳಿಗೆ ಸರಿಯಾದ ಭಾವ ಹೊರಗೆ ಬರಲಿಲ್ಲವೋ ಸರಿಯಾಗಿ ಹೇಳಲಾರೆವು. ಇದೆಲ್ಲಾ ಉದಾಹರಣೆಗೆ ಹೇಳುವುದೇ ಎಂದು ತಿಳಿದುಕೊಳ್ಳಿ. ಗೀತೆಯಲ್ಲಿ ಈ ಐದು ಶ್ಲೋಕಗಳಿಗೆ ಯಾರಾದರೂ ಸರಿಯಾದ ಭಾವ ಬರೆಯುತ್ತಾರೇನೋ ಆದರೆ, ಖುರ್‌ಆನ್ ಗ್ರಂಥದಲ್ಲಿ ಸುರಾ 6, ಆಯತ್ 95 ಕ್ಕಾಗಲಿ, ಸುರಾ 50, 21 ಆಯತ್‌ಗಾಗಲಿ ಯಾರೂ ಸರಿಯಾದ ವಿವರ ಹೇಳಲಾರರೆಂದೇ ಹೇಳಬಹುದು. ಈ ಎರಡು ಸುರಾಗಳಲ್ಲಿ ಎರಡು ವಾಕ್ಯಗಳಿಗೂ ಸಾವಿರ ವರ್ಷಗಳು ಪರಿಶೋಧನೆ ಮಾಡಿ ನೋಡಿದರೂ ತಿಳಿಯದ ಭಾವವಿರುವುದರಿಂದ ಬಹುಶಾ ಇವುಗಳ ಭಾವ ಯಾರಿಗೂ ತಿಳಿದಿಲ್ಲವೆಂದೇ ಹೇಳಬಹುದು. ಇದೂ ಸಹ ಉದಾಹರಣೆ ನಿಮಿತ್ತವೇ ಹೇಳಿದ್ದೇವೆ. ಖುರ್‌ಆನ್ ಗ್ರಂಥದಲ್ಲಿ ನೋಡಿದರೆ ಅದರಲ್ಲಿರುವ ದೇವರ ಭಾವನೆ ಬಹಳಜನರಿಗೆ ಅರ್ಥವಾಗಲಿಲ್ಲವೆಂದು, ಪುನಃ ದೇವರೇ ಹೇಳುವವರೆಗೂ ಅರ್ಥ ಆಗುವುದಿಲ್ಲವೆಂದು ಹೇಳಬಹುದು.

ಒಂದು ವಿಷಯ ಒಬ್ಬರಿಂದ ಹೊರಗೆ ಬಂದಾಗ ಅದು ವಾಕ್ಯವಾಗಿ ಇರುತ್ತದೆ. ದೇವರಿಂದ ಬಂದರೂ, ಮನುಷ್ಯನಿಂದ ಬಂದರೂ ಮೊದಲು

ಅದು ವಾಕ್ಯವಾಗಿರುತ್ತದೆ. 'ವಾಕ್ಯ ಎನ್ನುವ ಪದದಿಂದ ಹುಟ್ಟಿರುವುದು ವಾದ.' ಮೊದಲು ಹುಟ್ಟಿದ ವಾಕ್ಯವನ್ನು ಅನುಸರಿಸಿ ನಂತರ ಯಾರು ಹೇಳಿದರೂ ಅದನ್ನು ಅನುವಾದ ಎನ್ನುತ್ತೇವೆ. ಅನುವಾದ ಎಂದರೆ ಮೊದಲನೆಯದನ್ನು ಅನುಸರಿಸಿ ವಿವರ ಹೇಳುವುದೆಂದು ಅರ್ಥ. ಎಲ್ಲಿಯಾದರೂ ಮೊದಲನೆಯದನ್ನು ಅನುಸರಿಸಿ ಹೇಳುವಾಗ ವ್ಯಕ್ತಿ ಎರಡನೆಯವನೇ, ವಾದ ಅಥವಾ ವಾಕ್ಯವು ಎರಡನೆಯದೇ ಆಗುತ್ತದೆ. ವ್ಯಕ್ತಿ ಬದಲಾದಾಗ ವಾಕ್ಯದ ಅನುಕರಣೆಯೂ ಸಹ ಬದಲಾಗಿರಬಹುದು, ಇರದೆಹೋಗಬಹುದು. ಯಾರಾದರೇ ಮೊದಲು ಹೇಳಿದ ವ್ಯಕ್ತಿಯ ಭಾವ ನೂರರಷ್ಟು ಗ್ರಹಿಸಿಕೊಳ್ಳುತ್ತಾನೋ, ಅವನು ತನ್ನ ಅನುವಾದವನ್ನು ಮೊದಲು ಹೇಳಿದವನ ಭಾವನೆಗೆ ಸರಿಹೋಗುವಂತೆ ಬರೆಯುತ್ತಾನೆ, ಇಲ್ಲವೆ ಹೇಳುತ್ತಾನೆ. ಮೊದಲ ಭಾವವನ್ನು ಗ್ರಹಿಸದವನು ಮೊದಲನೆಯವನ ಭಾವವನ್ನು ಬಿಟ್ಟು ಪಕ್ಕಕ್ಕೆ ಹೋಗುತ್ತಾನೆ. ಉದಾಹರಣೆಗೆ ಒಬ್ಬ ವ್ಯಕ್ತಿ ತನ್ನ ಹತ್ತಿರವಿರುವ ಎರಡನೆಯವನಿಗೆ, ಮೂರನೆಯವನಿಗೆ ಅನ್ನ ತಿನ್ನುವ ತಟ್ಟೆಯನ್ನು (ಗಂಗಾಳವನ್ನು) ತೆಗೆದುಕೊಂಡು ಬಾ ಎಂದು ಹೇಳಿದ್ದಾನೆಂದುಕೊಳ್ಳಿ. ಆಗ ಎರಡನೆಯವನು ಊಟದ ಕೊಠಡಿಯಲ್ಲಿರುವ ಒಂದು ತಟ್ಟೆಯನ್ನು ತಂದಿದ್ದಾನೆ. ಮೂರನೆಯವನು ಹಾಗೆ ಮಾಡದೆ ಆಗ ಊಟ ಮಾಡುತ್ತಿರುವ ವ್ಯಕ್ತಿಯ ತಟ್ಟೆಯನ್ನು ಬಲವಂತವಾಗಿ ತಂದಿದ್ದಾನೆ. ಮೊದಲನೆಯವನು ಹೇಳಿರುವುದು ಅನ್ನದ ತಟ್ಟೆಯನ್ನು ತೆಗೆದುಕೊಂಡು ಬಾ ಎಂದು ಹೇಳಿದಾಗ, ಎರಡನೆಯವನಿಗೆ ಅನ್ನ ತಿನ್ನುವುದಕ್ಕೆ ಉಪಯೋಗಪಡುವ ತಟ್ಟೆಯೆಂದು ಅರ್ಥವಾಗಿ ಪಕ್ಕದಲ್ಲಿ ಖಾಲಿಯಾಗಿರುವ ತಟ್ಟೆಯನ್ನು ತಂದಿದ್ದಾನೆ. ಮೂರನೆಯವನಿಗೆ ಪ್ರಸ್ತುತ ಅನ್ನ ತಿನ್ನುತ್ತಿರುವ ತಟ್ಟೆಯನ್ನೇ ತೆಗೆದುಕೊಂಡು ಬಾ ಎಂದು ಅರ್ಥವಾಗಿ ಅನ್ನ ತಿನ್ನುತ್ತಿರುವವನ ಹತ್ತಿರದಿಂದ ಅನ್ನದೊಂದಿಗೆ ಸಹ ತಟ್ಟೆಯನ್ನು ತಂದನು. ಈಗ ಎರಡನೆ, ಮೂರನೆಯವನಲ್ಲಿ ಯಾರದು ಸರಿಯಾದ ಭಾವವೋ ನಮಗೆ ತಿಳಿಯಬೇಕೆಂದರೆ ಮೊದಲನೆಯವನು ಅನ್ನ ತಿನ್ನುವ ತಟ್ಟೆ ಎಂದು ಹೇಳಿದಾಗ ಅವನು ಯಾವ ಭಾವದಿಂದ ಹೇಳಿದ್ದಾನೋ,

ಆ ಭಾವ ತಿಳಿದಾಗಲೇ ಪಕ್ಕದಲ್ಲಿರುವ ನಮಗೂ ಸಹ ಯಾವುದು ಸರಿಯಾದುದೋ ಅರ್ಥವಾಗುವುದಿಲ್ಲ. ಹಾಗೆಯೇ ಭಗವದ್ಗೀತೆಯಲ್ಲಾಗಲಿ, ಉಳಿದ ಮೂಲ ಗ್ರಂಥಗಳಲ್ಲಾಗಲಿ, ಹೇಳಲಾದ ದೇವರ ವಾಕ್ಯಗಳು ಪೂರ್ತಿ ಅರ್ಥವಾಗದೆ ಸಂದಿಗ್ದದಲ್ಲಿ ಉಳಿದುಹೋಗಿವೆ. ಅವು ಪೂರ್ತಿಯಾಗಿ ಸರಿಯಾದ ಭಾವದಿಂದ ಅರ್ಥವಾಗಬೇಕೆಂದರೆ ಪುನಃ ದೇವರೇ ಬಂದು ಹೇಳಬೇಕಾಗಿದ್ದೇ. ಸಂದಿಗ್ದದಿಂದ ಕೂಡಿಕೊಂಡ ಕೆಲವು ಸೂಕ್ಷ್ಮವಾದ ಜ್ಞಾನವಾಕ್ಯಗಳು ದೇವರಿಗೆ ಹೊರತು ಯಾವ ಮಾನವನಿಗೆ ತಿಳಿದಿಲ್ಲವೆಂದು ಖುರಾನ್ ಗ್ರಂಥದಲ್ಲಿ ಸುರಾ 3, ಆಯತ್ 7ರಲ್ಲಿ ಹೇಳಲಾಗಿದೆ. **"ಭಗವದ್ಗೀತೆಯಲ್ಲಿ ಆದಿಯಲ್ಲಿ ಹೇಳಿದ ಜ್ಞಾನ ರಾಜವಿದ್ಯೆಯಾಗಿದೆ. ಹಾಗೆಯೇ ರಾಜ (ದೊಡ್ಡ) ರಹಸ್ಯವಾಗಿ ಇದೆ. ಆದ್ದರಿಂದ ಈಗ ಪುನಃ ವಿವರವಾಗಿ ಹೇಳುತ್ತಿದ್ದೇನೆ ಕೇಳು ಅರ್ಜುನಾ"** ಎಂದು ಭಗವಂತನಾದ ಶ್ರೀಕೃಷ್ಣನು ಹೇಳಿದ್ದಾನೆ.

ದೇವರು ಹೇಳಿದ ಭಗವದ್ಗೀತೆ ನಮ್ಮ ಹತ್ತಿರ ಇದ್ದರೂ, ಅನುವಾದದಲ್ಲಿ ಸ್ವಲ್ಪ ವ್ಯತ್ಯಾಸ ಬರುವುದರಲ್ಲಿ ಪೂರ್ತಿ ಅರ್ಥವಾಗದಂತೆಹೋಗಿದೆಯೆಂದು ಹೇಳಬಹುದು. ಕೆಲವರು ಮನುಷ್ಯರು ಗೀತೆಯ ಭಾವವನ್ನು ಅಲ್ಲಲ್ಲಿ ತಪ್ಪಾಗಿ ಬರೆಯುವುದೇ ಅಲ್ಲದೆ, ಅವರ ಸ್ವಾರ್ಥಕ್ಕೋಸ್ಕರ ಕೆಲವು ಶ್ಲೋಕಗಳನ್ನು ಸೃಷ್ಟಿಸಿ ಬೆರೆಯಿಸಿರುವುದು ಸಹ ನಡೆದಿದೆ. ಅಂತಹ ಶ್ಲೋಕಗಳಿಂದ ದೇವರ ಭಾವನೆಗೆ ವಿರುದ್ಧ ಭಾವವು ಗೀತೆಯಲ್ಲಿಯೇ ಕಾಣಿಸುತ್ತಿದೆ. ನಾವು ಬರೆದ **"ತ್ರೈತ ಸಿದ್ಧಾಂತ ಭಗವದ್ಗೀತೆ"** ಗ್ರಂಥದಲ್ಲಿ ಮನುಷ್ಯರು ಬರೆದ ಶ್ಲೋಕಗಳನ್ನು ಗುರುತಿಸಿ ತೆಗೆದುಹಾಕುವುದು ನಡೆದಿದೆ. ದೇವರು ಸೃಷ್ಠಿಯನ್ನು ತಯಾರು ಮಾಡಿದಾಗಲೇ ತನಗೆ ಪ್ರತ್ಯರ್ಥಿಯಾಗಿರುವುದಕ್ಕೆ, ಸ್ತ್ರೀ ಸ್ವರೂಪವಾಗಿ ಜೊತೆಯಾಗಿರುವುದಕ್ಕೆ ಪ್ರಕೃತಿಯನ್ನು ತಯಾರು ಮಾಡಿದ್ದಾನೆ. ಪ್ರಕೃತಿ ದೇವರ ಆಜ್ಞೆಯಿಂದ ಜೀವರಾಶಿಗಳೆಲ್ಲರನ್ನು ಪಾಲಿಸುತ್ತಿದೆ. ಪ್ರತಿ ಮನುಷ್ಯನಲ್ಲಿಯೂ ಶಕ್ತಿಯಾಗಿರುವುದಕ್ಕೆ ಆತ್ಮ ನೆಲಸಿರುವಾಗ, ಕೆಲಸವನ್ನು ಪ್ರೇರೇಪಿಸುವ ಗುಣಗಳಾಗಿ ಪ್ರಕೃತಿ ಇದೆಯೆಂದು ಹೇಳಬಹುದು. ಪ್ರಕೃತಿಯಿಂದ ತಯಾರಾದ ಗುಣಗಳನ್ನೇ ಮಾಯೆ ಎಂದೂ

ಸಹ ಅನ್ನುತ್ತಿದ್ದೇವೆ. ಗೀತೆಯನ್ನು ಬರೆಯುವುದಕ್ಕೆ ಮಾಯೆ ಸಂಬಂಧ ಗುಣಗಳು ತಪ್ಪು ಆಲೋಚನೆಯನ್ನು ಕೊಟ್ಟು ಮನುಷ್ಯನನ್ನು ಪ್ರೇರೇಪಿಸಿದಾಗ, ಆತ್ಮ ಹಸ್ತಗಳನ್ನು ಕದಲಿಸಿ ಬರೆಸುತ್ತಿದೆ. ಗೀತೆಯನ್ನು ಅನುವಾದಿಸುವುದರಲ್ಲಿ ಪ್ರೇರೇಪಣೆ, ಆಲೋಚನೆ, ಆಚರಣೆ ಎಲ್ಲವೂ ಗುಣಗಳು ಮತ್ತು ಆತ್ಮ ಮಾಡಿದಾಗ ಶರೀರದಲ್ಲಿನ ಜೀವಿಯು ಆ ಕಾರ್ಯದಲ್ಲಿ ಎಂತಹ ಭಾಗಸ್ವಾಮಿ ಆಗಲಿಲ್ಲ. ಆದರೂ ಜೀವಿಯು ತನ್ನ ಅಜ್ಞಾನದಿಂದ ಆ ಕೆಲಸವನ್ನು ತಾನೇ ಮಾಡಿದಂತೆ ಅಂದುಕೊಳ್ಳುತ್ತಿದ್ದಾನೆ. ಆ ಕಾರ್ಯದಲ್ಲಿನ ಕೆಟ್ಟದಕ್ಕಾಗಲಿ, ಒಳ್ಳೆಯದಕ್ಕಾಗಲಿ ತಾನೇ ಜವಾಬ್ದಾರಿಯಾಗುತ್ತಿದ್ದಾನೆ. ಗೀತೆಯನ್ನು ತಪ್ಪಾಗಿ ಬರೆಯುವಂತೆ ಮಾಡಿರುವುದು ಮಾಯೆ (ಗುಣಗಳು) ಆಗಿದ್ದು, ಶರೀರವನ್ನು ಕದಲಿಸಿ ಕೆಲಸವನ್ನು ಮಾಡಿರುವುದು ಆತ್ಮ. ಜೀವಿಯು ತಾನು ಮಾಡದ ಕೆಲಸವನ್ನು ಅನವಶ್ಯವಾಗಿ ಅಜ್ಞಾನದಿಂದ ಜವಾಬ್ದಾರಿಯಾದರೂ, ತಪ್ಪು ಭಾವವನ್ನು ಸೃಷ್ಟಿಸಿ ಬರೆಸಿರುವುದು ಪ್ರಕೃತಿ ಜನಿತವಾದ ಮಾಯೆ,  ಅದಕ್ಕೆ ಜೊತೆ ಆತ್ಮ. ಇವರಿಬ್ಬರೂ ದೇವರಿಂದ ನಿರ್ಮಿಸಲ್ಪಟ್ಟವರಾಗಿ ದೇವರೊಂದರ ಧರ್ಮವನ್ನು, ಶಕ್ತಿಯನ್ನು ತಿಳಿದವರಾಗಿದ್ದು, ಏಕೆ ಹೀಗೆ ತಪ್ಪಾಗಿ ಗೀತೆಯನ್ನು ಬರೆಸಿದ್ದಾರೆ ಎಂದು ಪ್ರಶ್ನಿಸಿಕೊಂಡರೆ, ದೇವರು ತನಗೆ ಇಷ್ಟವಿಲ್ಲದವರು ತನ್ನಿಂದ, ತನ್ನ ಜ್ಞಾನದಿಂದ ದೂರವಾಗಿ ಹೋಗುವುದಕ್ಕೆ ತನ್ನ ಮಾಯೆಯಿಂದ, ಆತ್ಮನಿಂದ ಹಾಗೆ ಮಾಡಿಸಿದ್ದಾನೆಂದು ತಿಳಿಯುತ್ತದೆ. ಇದೆಲ್ಲಾ ತೆರೆ ಹಿಂದೆ ಯಾರಿಗೂ ತಿಳಿಯದಂತೆ ನಡೆಯುವ ತತಂಗವಿದು ಎಂದು ಹೇಳಬಹುದು.

ತೆರೆ ಮುಂದೆ ಆ ಕಾರ್ಯದಲ್ಲಿನ ತಪ್ಪಿಗೆ ಜೀವಿಯೇ ಜವಾಬ್ದಾರಿ ಆಗುತ್ತಿದ್ದಾನೆ. ತಾನು ಮಾಡದಿದ್ದರೂ ತಾನೇ ಮಾಡಿದ್ದೇನೆಂದು ಜೀವಿಯು ಅಂದುಕೊಳ್ಳುವುದರಿಂದ, ಗೀತೆಯನ್ನು ತಪ್ಪು ಭಾವಗಳಿಂದ ಅನುವಾದಿಸಿದಕ್ಕೆ ಜೀವಿಯೇ ಶಿಕ್ಷಾರ್ಹನಾಗುತ್ತಿದ್ದಾನೆ. ಆದ್ದರಿಂದ ಆಧ್ಯಾತ್ಮಿಕದಲ್ಲಿ ಮುಂದಕ್ಕೆ ಹೋಗುವುದಕ್ಕೆ ಸ್ವಯಂ ಹಕ್ಕುದಾರನಾಗಿ ಜೀವಿಯಿದ್ದು, ದೇವರು ಅವಕಾಶ

ಕೊಟ್ಟರೂ ಅದನ್ನು ವಿನಿಯೋಗಿಸಿಕೊಳ್ಳದಂತೆ, ಎಲ್ಲದರಲ್ಲಿಯೂ ಅಹಮ್‌ನ್ನು ಹೊಂದುತ್ತಿರುವುದರಿಂದ, ಮಾಡದ ತಪ್ಪುಗಳಿಗೆ ಶಿಕ್ಷಾರ್ಹನಾಗುತ್ತಿದ್ದಾನೆ. ದೇವರ ಮಾರ್ಗದಲ್ಲಿ ಕರ್ಮ ಆತಂಕ ಇಲ್ಲದಿರುವುದರಿಂದ, ಕರ್ಮಪ್ರಕಾರ ಜ್ಞಾನ ಲಭಿಸುತ್ತದೆಂಬ ನಿಯಮ ಇಲ್ಲದಿರುವುದರಿಂದ, ಶ್ರದ್ಧೆ ಇದ್ದರೆ ಎಂತಹ ಜ್ಞಾನವನ್ನಾದರೂ ತಿಳಿದುಕೊಳ್ಳಬಹುದು. ಅವಕಾಶವಿದ್ದರೂ ಮನುಷ್ಯ ತನ್ನ ಶ್ರದ್ಧೆಯನ್ನು ಹೊರ ಪ್ರಪಂಚದ ಮೇಲೆ ಇಡುವುದರಿಂದ, ದೇವರಿಗೆ ಇಷ್ಟ ಇಲ್ಲದವನಾಗುತ್ತಿದ್ದಾನೆ. ದೇವರಿಗೆ ಇಷ್ಟವಿಲ್ಲದವನನ್ನು ಪ್ರಕೃತಿ ಮಾಯೆರೂಪವಾಗಿ ತನ್ನ ಗುಣಗಳ ಮೂಲಕ ದೇವರ ಮಾರ್ಗದಿಂದ ದೂರವಾಗಿ ಹೋಗುವಂತೆ ಮಾಡುತ್ತಿದೆ. ಆದ್ದರಿಂದಲೇ ವೇಮನಯೋಗಿ ತನ್ನ ಪದ್ಯಗಳಲ್ಲಿ **"ಪತಿ ಯೊಪ್ಪಿದರೆ ಸತಿ ಒಪ್ಪುತ್ತದೆ"** ಎಂದು ಹೇಳಿದ್ದಾನೆ. ಪತಿ ಎಂದರೆ ಪರಮಾತ್ಮ ಎಂದೂ, ಸತಿ ಎಂದರೆ ಪ್ರಕೃತಿ ಎಂದೂ ತಿಳಿಯಬೇಕು.

ದೇವರ ವಿಷಯದಲ್ಲಿ ಸರ್ವಸ್ವತಂತ್ರನಾದ ಜೀವಾತ್ಮ, ಸ್ವಲ್ಪವೂ ದೇವರ ವಿಷಯದ ಮೇಲೆ ಶ್ರದ್ಧೆ ಇಲ್ಲದವನಾಗುವುದರಿಂದ, ಪ್ರಕೃತಿ ಸಂಬಂಧ ವಿಷಯದ ಮೇಲೆಯೇ ಆಸಕ್ತಿಯನ್ನು ತೋರಿಸುವುದರಿಂದ, ಜೀವಿಯು ದೇವರ ವಿಷಯದಲ್ಲಿ ತಪ್ಪು ಮಾಡಿದವನಾಗುತ್ತಿದ್ದಾನೆ, ಶಿಕ್ಷಾರ್ಹನಾಗುತ್ತಿದ್ದಾನೆ, ದೇವರು ತನ್ನ ಜ್ಞಾನವನ್ನು ಭಗವಂತನ ಮೂಲಕ ಭೂಮಿಮೇಲೆ ತಿಳಿಯುವಂತೆ ಮಾಡಿದರೂ, ಭಗವಂತನು ಭಗವದ್ಗೀತೆಯಲ್ಲಿ ಹೇಳದ ಅನೇಕ ಆರಾಧನೆಗಳನ್ನು ಜೀವಿಯು ಸ್ವತಃವಾಗಿ ಸೃಷ್ಟಿಸಿಕೊಳ್ಳುತ್ತಿದ್ದಾನೆ.

ದೇವರು ತನ್ನನ್ನು ಹೇಗೆ ಆರಾಧಿಸಬೇಕೋ, ತನ್ನ ಜ್ಞಾನದಿಂದ ದೇವರನ್ನು ಹೇಗೆ ತಿಳಿಯಬಹುದೋ, ದೇವರನ್ನು ತಿಳಿಸುವುದಕ್ಕೆ ಉಪಯೋಗ ಪಡುವ ಧರ್ಮಗಳಾವುವೋ, ದೇವರನ್ನು ತಿಳಿದುಕೊಳ್ಳುವುದಕ್ಕೆ ಸ್ವಲ್ಪವೂ ಕೆಲಸಕ್ಕೆಬಾರದ ಅಧರ್ಮಗಳಾವುವೋ, ಪೂರ್ತಿ ವಿವರವಾಗಿ ಹೇಳಿದರೂ, ಧರ್ಮಗಳನ್ನು ಸ್ವಲ್ಪವೂ ಗುರುತಿಸದೆ, ಆಚರಿಸದೆಹೋಗುವುದೇ ಅಲ್ಲದೇ,

ದೈವಮಾರ್ಗಕ್ಕೂ, ಗಮ್ಯಕ್ಕೂ ಆತಂಕವಾದ ಅಧರ್ಮಗಳನ್ನು ಆಚರಿಸುತ್ತಿದ್ದಾನೆ. ಇಂತಹ ಅಧರ್ಮ ವಿಷಯಗಳಲ್ಲಿ ಯಾವ ಜ್ಞಾನ ತಿಳಿಯದ ಸಾಧಾರಣ ಮನುಷ್ಯನಿಗಿಂತ ನಮಗೆ ಜ್ಞಾನ ತಿಳಿದಿದೆಯೆಂಬ ಸ್ವಾಮೀಜೀಗಳು ಮೊದಲಾದವರು ದೈವದೃಷ್ಟಿಯಲ್ಲಿ ಅಪರಾಧಿಗಳಾಗುತ್ತಿದ್ದಾರೆ. ಜ್ಞಾನಿಗಳು, ಸ್ವಾಮಿಗಳು ಎನ್ನುವವರು ಹೇಗೆ ಧರ್ಮಗಳನ್ನು ಗುರುತಿಸದೆ ಅಧರ್ಮ ಆಚರಣೆ ಮಾಡುತ್ತಿದ್ದಾರೋ  ಸ್ವಲ್ಪ ವಿವರವಾಗಿ ತಿಳಿದುಕೊಳ್ಳೋಣ. ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ 7ನೇ ಶ್ಲೋಕದಲ್ಲಿ ಹೇಳಿದ ಭಾವ ಹೀಗಿದೆ. **“ಭೂಮಿಮೇಲೆ ಯಾವಾಗ್ಯಾವಾಗ ಧರ್ಮಕ್ಕೆ ಮುಪ್ಪು ಉಂಟಾಗಿ, ಅಧರ್ಮ ಅಭಿವೃದ್ಧಿಯಾಗುತ್ತದೋ, ಆಗಾಗ ನನ್ನನ್ನು ನಾನು ತಯಾರು ಮಾಡಿಕೊಂಡು ಬರುತ್ತೇನೆ”** ಎಂದು ದೇವರು ಭಗವಂತನ ರೂಪದಿಂದ ಹೇಳಿದ್ದಾನೆ. ಆ ವಿಧವಾಗಿ ಹೇಳುವುದಲ್ಲದೇ, ಆಗ ತಾನು ಬಂದಿರುವುದು ಧರ್ಮಗಳನ್ನು ತಿಳಿಸುವುದಕ್ಕೆ ಎಂದು ಹೇಳಿ, ತಾನು ಯಾವ ವಿಧವಾದ ಅಧರ್ಮಗಳಿಂದ ತಿಳಿಯಲ್ಪಡುವುದಿಲ್ಲವೋ, ಯಾವ ವಿಧವಾದ ಧರ್ಮಗಳಿಂದ ತಿಳಿಯಲ್ಪಡು ತ್ತಾನೋ ಸಹ ವಿವರವಾಗಿ ಹೇಳಿದ್ದಾನೆ.

ಉದಾಹರಣೆಗೆ ಒಬ್ಬ ಸ್ವಾಮೀಜೀ ಭಗವದ್ಗೀತೆಯನ್ನು ಹತ್ತು ದಿನಗಳು ಚೆನ್ನಾಗಿ ಉಪನ್ಯಾಸಿಸಿ ಒಳ್ಳೆಯ ಹೆಸರು ತಂದುಕೊಂಡಿದ್ದಾನೆ. ಭಗವದ್ಗೀತೆಯನ್ನು ಹೇಳುವಾಗ ಎಷ್ಟೋ ಉಪಮಾನಗಳು ಹೇಳಿ ಎಲ್ಲರಿಗೂ ಅರ್ಥವಾಗುವಂತೆ ಬೋಧಿಸಿದ್ದಾನೆ. ಆತನ ಬೋಧನೆಗಳು ಕೇಳಿದ ಬಹಳಜನರು ಆ ದಿನದಿಂದ ಅಸಲಾದ ದೇವರು ಒಬ್ಬನಿದ್ದಾನೆಂದು, ಆತನೇ ಸರ್ವಕ್ಕೂ ಅಧಿಪತಿ ಎಂದೂ, ಆತನನ್ನು ಆರಾಧಿಸುವುದರಿಂದಲೇ ಮೋಕ್ಷ ಲಭಿಸುತ್ತದೆಂದು ತಿಳಿದುಕೊಂಡಿದ್ದಾರೆ. ಆಗಿನಿಂದ ಇತರ ದೇವತೆಗಳನ್ನಾಗಲಿ, ಗಿಡಕ್ಕೂ, ಹುತ್ತಕ್ಕೂ ಪೂಜೆಮಾಡುವುದಾಗಲಿ, ಪಿತೃದೇವತೆಗಳಿಗೆ ಬಟ್ಟೆಗಳು ಸಮರ್ಪಿಸುವುದಾಗಲಿ, ಪೂಜಿಸಿ ತೆಂಗಿನ ಕಾಯಿಗಳು ಹೊಡೆಯುವುದಾಗಲಿ ಬಿಟ್ಟಿದ್ದಾರೆ. ಏಕೆ ಹಾಗೆ ಬಿಟ್ಟಿದ್ದಾರೆಂದು ಇತರರು ಅವರನ್ನು ಕೇಳಿದರೆ ಜೀರ್ಣಾನಂದ ಸ್ವಾಮಿ ಹೇಳಿದ ಗೀತಾ

ಬೋಧನೆಯನ್ನು ಕೇಳಿದ ನಂತರ ಭಗವದ್ಗಗೀತೆ ಚೆನ್ನಾಗಿ ಅರ್ಥವಾಗಿದೆ. ಜೇರ್ಣಾನಂದ ಸ್ವಾಮಿ ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗವೆಂಬ ಅಧ್ಯಾಯದಲ್ಲಿ 25ನೇ ಶ್ಲೋಕವನ್ನು ಹೇಳಿ ಅದರ ಭಾವವನ್ನು ತಿಳಿಸಿದ ನಂತರ ಇನ್ನು ಯಾರನ್ನು ಪೂಜಿಸಬಾರದು ಎಂದುಕೊಂಡಿದ್ದೇವೆ ಎಂದರು. ಅವರು ಕೇಳಿರುವುದು ಏನೆಂದರೆ!

***25ನೇ ಶ್ಲೋ॥ ಯಾನ್ತಿ ದೇವವ್ರತಾನ್ ದೇವಾನ್, ಪಿತೃನ್ ಯಾನ್ತಿ ಪಿತೃ ವ್ರತಾಃ ॥***
***ಭೂತಾನಿ ಯಾನ್ತಿ ಭೂತೇಜ್ಯಾಃ ಯಾನ್ತಿ ಮದ್ಯಾಜಿನೋಪಿ ಮಾಮ್ ॥***

**ಭಾವಾರ್ಥ :** "ದೇವತೆಗಳನ್ನು ಪೂಜಿಸಿದವರು ದೇವತೆಗಳೊಳಗೆ ಹೋಗಿ ಸೇರುತ್ತಾರೆ. ಪಿತೃ ದೇವತೆಗಳನ್ನು (ದೊಡ್ಡವರನ್ನು) ಪೂಜಿಸುವವರು ಪಿತೃ ದೇವತೆಗಳೊಳಗೆ ಹೋಗಿ ಸೇರುತ್ತಾರೆ. ಹಾವುಗಳನ್ನು, ಹಸುಗಳನ್ನು, ಗಿಡಮರಗಳನ್ನು ಮೊದಲಾದ ಜೀವರಾಶಿಗಳನ್ನು ಪೂಜಿಸುವವರು ಅವುಗಳೊಳಗೆ ಹೋಗಿ ಜನ್ಮಿಸುತ್ತಾರೆ. ನನ್ನನ್ನು ಪೂಜಿಸಿದವರು ಮಾತ್ರ ನನ್ನಲ್ಲಿಯೇ ಬಂದು ಸೇರುತ್ತಾರೆ." ಎಂದು ಇದೆ. ಈ ಶ್ಲೋಕವನ್ನು ಇದರ ಭಾವವನ್ನು ಕೇಳಿದವರು ದೇವರನ್ನು ಆರಾಧಿಸಿ ದೇವರಲ್ಲಿ ಸೇರಬೇಕೆಂದುಕೊಂಡಿದ್ದಾರೆ. ದೇವರು ಹೊರತು ಇತರರು ಯಾರೂ ಬೇಡ ಎಂದುಕೊಂಡಿದ್ದಾರೆ. ಆ ವಿಧವಾಗಿ ಕೆಲವರು ಆ ಶ್ಲೋಕವನ್ನು ಕೇಳಿ ಬದಲಾಗಿರುವಾಗ, ಕೆಲವು ದಿನಗಳ ನಂತರ ಒಂದು ಟಿ.ವಿ ಪ್ರೋಗ್ರಾಮ್‌ನಲ್ಲಿ ಭಗವದ್ಗೀತೆಯನ್ನು ಅದರಲ್ಲಿನ 'ಯಾನ್ತಿ ದೇವವ್ರತಾನ್ ದೇವಾನ್' ಎಂಬ ಶ್ಲೋಕವನ್ನು ಬೋಧಿಸಿದ ಜೇರ್ಣಾನಂದಸ್ವಾಮಿ ಭಾಗ್ಯಲಕ್ಷ್ಮಿ ಗುಡಿಯಲ್ಲಿ ಭಾಗ್ಯಲಕ್ಷ್ಮಿಗೆ ಪೂಜೆ ಮಾಡುತ್ತಾ ಕಾಣಿಸಿದನು. ಆತನ ಬೋಧನೆ ಯಿಂದ ಬದಲಾದವರೆಲ್ಲರೂ ಆ ದೃಶ್ಯವನ್ನು ನೋಡಿದ್ದಾರೆ. ಆಗ ಅವರಿಗೆ ಒಂದು ಪ್ರಶ್ನೆ ಬಂದಿದೆ. ಸೃಷ್ಠಿಗೆಲ್ಲಾ ದೇವರೇ ದೊಡ್ಡವನೆಂದು, ಆತನನ್ನೇ ಆರಾಧಿಸಬೇಕೆಂದು, ಆತನನ್ನು ಆರಾಧಿಸಿದರೆ ಆತನ ಹತ್ತಿರಕ್ಕೆ ಹೋಗುತ್ತಾರೆ,

ಇಲ್ಲದಿದ್ದರೆ ನೀವು ಆರಾಧಿಸಿದವರ ಹತ್ತಿರಕ್ಕೆ ಹೋಗುತ್ತಾರೆಂದು ನಮ್ಮೆಲ್ಲರಿಗೂ ಹೇಳಿದ ಜೀರ್ಣಾನಂದಸ್ವಾಮಿ ಏಕೆ ಹಾಗೆ ದೇವರು ಅಲ್ಲದಂತಹ ದೇವತೆಯನ್ನು ಪೂಜಿಸುತ್ತಿದ್ದಾನೆಂದು ಅಂದುಕೊಂಡಿದ್ದಾರೆ.

ಈಗ ನಮಗೆ ತಿಳಿಯದಂತೆಯೇ ಅಪರಾದ, ಕೋರ್ಟು, ವಿಚಾರಣೆ, ಶಿಕ್ಷೆ ಅವು ನಡೆದುಹೋಗುತ್ತಿರುತ್ತವೆ. ದೇವರ ಜ್ಞಾನವಾದ ಭಗವದ್ಗೀತೆಯಲ್ಲಿ ದೇವರ ಆರಾಧನೆಯನ್ನು ಕೃಷ್ಣನು ದೊಡ್ಡದಾಗಿ ಹೇಳುತ್ತಾ, ದೇವತೆಗಳನ್ನು ಪೂಜಿಸುವುದು ಮಾಡಿದವರೆಲ್ಲರೂ ಅಜ್ಞಾನಿಗಳೆಂದು ಸಹ ಹೇಳಿದ್ದಾರೆ. ವಿಜ್ಞಾನಯೋಗ 20, 23ನೇ ಶ್ಲೋಕಗಳನ್ನು ನೋಡೋಣ.

***20ನೇ ಶ್ಲೋ॥ ಕಾಮೈಸ್ತೈಸ್ತೈರ್ಹೃತ ಜ್ಞಾನಾಃ ಪ್ರಪದ್ಯಂತೇನ್ಯ ದೇವತಾಃ ।***
***ತಂತಂ ನಿಯಮ ಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ॥***

**ಭಾವಾರ್ಥ:–** ಪ್ರಪಂಚ ಸಂಬಂಧಗಳಾದ ಪಾಪಗಳಿಂದ, ಆಸೆಗಳಲ್ಲಿ ಮುಳುಗಿದ ಅಜ್ಞಾನಿಗಳು ಕೆಲವರು, ನನ್ನನ್ನು ಬಿಟ್ಟು ಇತರ ದೇವತೆಗಳ ನಿಯಮದ ಪ್ರಕಾರ ಅವರನ್ನು ಪೂಜಿಸುತ್ತಿರುತ್ತಾರೆ.

***23ನೇ ಶ್ಲೋ ॥ ಅಂತ ವತ್ತು ಫಲಂ ತೇಷಾಂ ತದ್ಭವ ತ್ಯಲ್ಪ ಮೇಧಸಾಮ್।***
***ದೇವಾನ್ ದೇವ ಯಜೋಯಾಂತಿ ಮದ್ಭಕ್ತಾ ಯಾಂತಿ ಮಾಮಪಿ॥***

**ಭಾವಾರ್ಥ :–** ಅಲ್ಪ ಬುದ್ಧಿ ಇರುವವರು ಹೊಂದುವ ಫಲಿತವು ಸಹ ಅಲ್ಪವಾಗಿಯೇ ಇರುತ್ತದೆ. ದೇವತೆಗಳನ್ನು ಆರಾಧಿಸುವ ದೇವತಾ ಭಕ್ತರೆಲ್ಲರೂ ದೇವತೆಗಳನ್ನು ಸೇರಿದಾಗ, ನನ್ನ ಭಕ್ತರು ಮಾತ್ರ ನನ್ನನ್ನು ಸೇರುತ್ತಾರೆ.

ದೇವರು ಭಗವಂತನಾಗಿ ಭಗವದ್ಗೀತೆಯಲ್ಲಿ ಮೊದಲೆ ಹೇಳಿದ ಈ ಮಾತುಗಳನ್ನನುಸರಿಸಿದರೆ ಈಗ ಜೀರ್ಣಾನಂದಸ್ವಾಮಿ ಮಾಡಿರುವುದು ತಪ್ಪಾ ಅಥವಾ ತಪ್ಪಲ್ಲವೆ? ಎಂದು ನಾವು ಆಲೋಚಿಸೋಣ. ಭಗವದ್ಗೀತೆಯನ್ನು ಪರಿಪೂರ್ಣವಾಗಿ ತಿಳಿದ ಜೀರ್ಣಾನಂದಸ್ವಾಮಿ ದೇವರು ಹೇಳಿದ ಮಾತುಗಳು

ಶ್ಲೋಕಗಳು ಜ್ಞಾಪಕವಿದ್ದರೂ ಅವುಗಳನ್ನು ಇತರರಿಗೆ ಹೇಳುವುದಕ್ಕೇ ಕಲಿತುಕೊಂಡಿದ್ದಾನೆ. ವಿಜ್ಞಾನ ಯೋಗದಲ್ಲಿ 20ನೇ ಶ್ಲೋಕದಲ್ಲಿ ಹೇಳಿದಂತೆ ಪ್ರಪಂಚ ಸಂಬಂಧ ಆಸೆಗಳಿಂದ ಕೂಡಿಕೊಂಡವರು, ಆ ಆಸೆಗಳಿಂದ ಜ್ಞಾನವನ್ನು ಮರೆತುಹೋದವರಾಗಿ, ಅಜ್ಞಾನಿಗಳಾಗುತ್ತಾ ದೇವತೆಗಳ ನಿಯಮಗಳ ಪ್ರಕಾರ ಅವರನ್ನು ಪೂಜಿಸುವರೆಂದು ಇದ್ದಂತೆ, ಜೀರ್ಣಾನಂದಸ್ವಾಮಿ ತನ್ನಲ್ಲಿನ ಆಸೆಯಿಂದ ದೇವತೆಗಳನ್ನು ಪೂಜಿಸಿದರೆ ಆಕೆ ತನಗೆ ಒಳ್ಳೆಯದು ಮಾಡುತ್ತದೆಯೆಂಬ ಭಾವನೆಯಿಂದ ಭಾಗ್ಯಲಕ್ಷ್ಮಿ ಗುಡಿಯೊಳಗೆ ಹೋಗಿ ಪೂಜೆ ಮಾಡುವುದು ನಡೆದಿದೆ. ಭಗವದ್ಗೀತೆಯನ್ನು ಓದಿದ ಸಾಮಾನ್ಯ ಮನುಷ್ಯನಿಗಾದರೂ ಅದರಲ್ಲಿನ ದೇವರಿಗೆ ದೇವತೆಗಳಿಗೆ ಇರುವ ತಾರತಮ್ಯ ತಿಳಿದುಹೋಗುತ್ತದೆ. ಅಂತಹ ವಿಧಾನ ಭಗವದ್ಗೀತೆಯಲ್ಲಿ ಇರುವಾಗ, ಇತರರಿಗೆ ಗೀತೆಯನ್ನು ಬೋಧಿಸಿ ಸಾಮರ್ಥ್ಯಹೊಂದಿರುವ ಸ್ವಾಮೀಜೀಯೇ ಇಲ್ಲಿ ದೇವರು ದೊಡ್ಡವನೆಂದು ಹೇಳಿ, ಅಲ್ಲಿಗೆ ಹೋದ ನಂತರ ತನ್ನ ಮಾತನ್ನು ಮರೆತುಹೋಗಿ, ದೇವರಿಗಿಂತ ದೇವತೆಯೇ ದೊಡ್ಡದೆನ್ನುವಂತೆ, ಒಬ್ಬ ಸ್ತ್ರೀ ಸ್ವರೂಪ ದೇವತೆಗಳನ್ನು ಪೂಜಿಸುವುದು ನಮಗೆ ಹೇಗಿದ್ದರೂ, ಅದು ದೇವರ ನ್ಯಾಯಸ್ಥಾನದಲ್ಲಿ ದೊಡ್ಡ ಅಪರಾದವಾಗುತ್ತದೆ.

ವಿಶ್ವವನ್ನು ಅದರಲ್ಲಿನ ಜೀವಜಾಲವನ್ನು ಸೃಷ್ಠಿಸಿ, ತನ್ನಿಂದ ಸೃಷ್ಠಿಸಲ್ಪಟ್ಟ ಸೃಷ್ಠಿ ಎಲ್ಲ ಕಾಲವು ಸಾಗುವಂತೆ ಏರ್ಪಾಟು ಮಾಡಿದ ದೇವರು ನನ್ನನ್ನು ತಿಳಿದುಕೊಳ್ಳಿ, ನನ್ನಿಂದಲೇ ಎಲ್ಲಾ ನಿಮಗೆ ನಡೆಯುತ್ತಿವೆ, ನಿಮಗಿರುವ ಈ ಜನ್ಮಗಳು ಇಲ್ಲದಂತೆ ಹೋಗಬೇಕೆಂದರೆ ನನ್ನ ಜ್ಞಾನವೇ ಆಧಾರವೆಂದು ಆತನ ಜ್ಞಾನವನ್ನು ಗೀತೆಯಲ್ಲಿ ತಿಳಿಸಿದರೆ, ಆ ಮಾತನ್ನು ಲೆಕ್ಕ ಮಾಡದಂತೆ ಪ್ರವರ್ತಿಸುವವರು ಯಾರಾದರೂ, ದೇವರ ಶಿಕ್ಷೆಗೆ ಅರ್ಹರು ಆಗದೆ ತಪ್ಪದು. ದೇವರು ಹೇಳದೆಹೋಗಿದ್ದರೆ ನಮಗೆ ತಿಳಿದಿಲ್ಲ ಎಂದು ತಪ್ಪಿಸಿಕೊಳ್ಳುವುದಕ್ಕೆ ಅವಕಾಶವಿದೆ. ಅಂತಹ ಅವಕಾಶ ಇಲ್ಲದಂತೆ ಕೆಲವರಿಗೆ ಭಗವದ್ಗೀತೆ ರೂಪದಲ್ಲಿಯೂ, ಮತ್ತೆ ಕೆಲವರಿಗೆ ಬೈಬಲ್ ರೂಪದಲ್ಲಿಯೂ, ಇನ್ನೂ ಕೆಲವರಿಗೆ

ಖುರ್‌ಆನ್ ಗ್ರಂಥರೂಪದಲ್ಲಿಯೂ ದೇವರು ತನ್ನ ಧರ್ಮಗಳನ್ನು ಸಂಪೂರ್ಣವಾಗಿ ತಿಳಿಸಿದ್ದಾನೆ. ದೇವರು ಮೊದಲೆ ತನ್ನ ಜ್ಞಾನವನ್ನು ತಿಳಿಸಿರುವಾಗ, ದೇವರು ಹೇಳಿದ ಜ್ಞಾನವನ್ನು ತಿಳಿದುಕೊಳ್ಳುವುದೇ ಜೀವನ ಸಾರಾಂಶವೆಂದು ತಿಳಿಯದೆ, ಪ್ರಪಂಚದಲ್ಲಿ ಹಣ ಸಂಪಾದಿಸುವುದೇ ಜೀವನ ಸಾರಾಂಶವಾಗಿ ಕೆಲವರು ಇಟ್ಟುಕೊಂಡಿದ್ದಾರೆ. ಸಾಮಾನ್ಯ ಮನುಷ್ಯನನ್ನು ಪಕ್ಕಕ್ಕಿಟ್ಟು ನಮಗೂ ಜ್ಞಾನ ತಿಳಿದಿದೆ ಎಂದು ಬೋಧಿಸುವ ಸ್ವಾಮೀಜೀಗಳೇ ದೇವರ ಮಾರ್ಗದಲ್ಲಿ ಹೆಚ್ಚಾಗಿ ಶಿಕ್ಷಾರ್ಹರಾಗುತ್ತಿದ್ದಾರೆಂದು ಹೇಳಬಹುದು.

ಸಾಧಾರಣ ಮನುಷ್ಯ ದೇವರ ಮಾರ್ಗವನ್ನು ಅನುಸರಿಸಬೇಕೆಂದರೆ ಮೊದಲು ಏನು ಮಾಡಬೇಕೋ, ಹೇಗೆ ಅನುಸರಿಸಬೇಕೋ ತಿಳಿಯುವುದಕ್ಕೆ ಒಬ್ಬ ಗುರುವನ್ನು ಆಶ್ರಯಿಸಿ, ಅವರು ಹೇಳಿದಂತೆ ಮಾಡುವುದಕ್ಕೆ ಸಜ್ಜಾಗುತ್ತಾನೆ. ಪ್ರಸ್ತುತ ಕಾಲದಲ್ಲಾಗಲಿ, ಸ್ವಲ್ಪ ಪೂರ್ವಕಾಲದಲ್ಲಾಗಲಿ ಒಬ್ಬ ವ್ಯಕ್ತಿ ಗುರುವನ್ನು ಆಶ್ರಯಿಸಿದರೆ, ಗುರು ಮೊದಲು ಆಶ್ರಯಿಸಿದ ವ್ಯಕ್ತಿಗೆ ಗುರೂಪದೇಶ ಕೊಟ್ಟು ತನ್ನ ಶಿಷ್ಯನನ್ನಾಗಿ ಮಾಡಿಕೊಳ್ಳುತ್ತಾನೆ. ಅದರಿಂದ ಆ ವ್ಯಕ್ತಿ (ಶಿಷ್ಯನು) ಆ ಗುರುವನ್ನು ಬಿಟ್ಟು ಪಕ್ಕ ಗುರು ಹತ್ತಿರಕ್ಕೆ ಹೋಗದಂತೆ ಮಾಡಿಕೊಳ್ಳುವುದು ನಡೆಯುತ್ತದೆ. ಹಾಗೆ ಅಂದಿನಿಂದ ಅವನು ತನ್ನವನು ಎನ್ನುವಂತೆ ಗುರುವು ಶಿಷ್ಯನನ್ನು ಗುರೂಪದೇಶದಿಂದ ಬಂಧಿಸಿಕೊಳ್ಳುತ್ತಿದ್ದಾನೆ. ಆಗಿನಿಂದ ಇತರರ ಗ್ರಂಥಗಳು ಓದಬಾರದೆಂದು, ಇತರರ ಬೋಧನೆಗಳು ಕೇಳಬಾರದೆಂದು ಹೇಳಿ, ಶಿಷ್ಯನಿಗೆ ಪಕ್ಕದ ದೃಷ್ಠಿಯಿಲ್ಲದಂತೆ ಮಾಡುತ್ತಾರೆ. ನಂತರ ತಾನು ಮೊದಲು ಉಪದೇಶವಾಗಿ ಹೇಳಿದ ಮಂತ್ರವನ್ನು ಪ್ರತಿ ದಿನ ಧ್ಯಾನಿಸಬೇಕೆಂದು ಹೇಳುತ್ತಾರೆ. ಹಾಗೆ ಪ್ರತಿ ದಿನ ಧ್ಯಾನ (ಮೆಡಿಟೇಷನ್) ಮಾಡುವುದೇ ಜೀವನದಲ್ಲಿ ಮುಖ್ಯವೆಂದು, ಹಾಗೆ ಮಾಡುವುದರಿಂದಲೇ ಮನುಷ್ಯ ದೇವರ ಮಾರ್ಗದಲ್ಲಿ ಪ್ರಯಾಣಿಸಿ ಕೊನೆಗೆ ದೇವರನ್ನು ಸೇರುತ್ತಾನೆಂದು ಹೇಳುತ್ತಾರೆ. ಅಷ್ಟೇ ಅಲ್ಲದೆ ಮಧ್ಯದಲ್ಲಿ ಯಜ್ಞಗಳು ಮಾಡಿಸುವುದೂ, ವೇದಗಳನ್ನು ಓದಿಸುವುದು, ದಾನಗಳನ್ನು ಮಾಡಿಸುವುದು ನಡೆಯುತ್ತದೆ. ಏನಾದರೂ ಒಂದನ್ನು ಧ್ಯಾನಿಸುವುದನ್ನು ತಪಸ್ಸು ಎಂದೂ ಸಹ ಅನ್ನಬಹುದು.

ಪ್ರಪಂಚದಲ್ಲಿ ಒಬ್ಬವ್ಯಕ್ತಿ ತಾನು ಸ್ವಾಮಿಯಾಗಿಯೋ, ಗುರುವಾಗಿಯೋ ಇತರರಿಗೆ ತಿಳಿಯುವುದಕ್ಕೆ ಹೊರಗೆ ಕಾಣಿಸುವ ಯಜ್ಞಗಳು, ದಾನಗಳು, ವೇದಾಧ್ಯಯನಗಳು, ತಪಸ್ಸುಗಳನ್ನು ಮುಖ್ಯವಾಗಿ ಮಾಡುತ್ತಿದ್ದಾನೆ. ಈ ನಾಲ್ಕು ಮಾಡಿದರೆ ಸಮಾಜದಲ್ಲಿ ಒಬ್ಬ ಜ್ಞಾನಿಯಾಗಿ, ಸ್ವಾಮಿಯಾಗಿ, ಗುರುವಾಗಿ ತಿಳಿಯುತ್ತಾನೆ. ಒಬ್ಬ ಗುರುವಾಗಿರುವ ಸ್ವಾಮೀಜಿ ತಾನು ಈ ನಾಲ್ಕು ಕೆಲಸಗಳಲ್ಲಿ ಕೆಲವನ್ನು ಹೆಚ್ಚಾಗಿ, ಕೆಲವನ್ನು ಕಡಿಮೆಯಾಗಿ ಮಾಡುತ್ತಾ, ತನ್ನನ್ನು ಆಶ್ರಯಿಸಿದ ಶಿಷ್ಯರಹತ್ತಿರ ಸಹ ಮಾಡಿಸುತ್ತಿರುತ್ತಾನೆ. ಹಾಗೆ ಗುರುಗಳ ಹತ್ತಿರ ಸೇರಿದ ಶಿಷ್ಯರು ಸಹ ಯಜ್ಞ, ದಾನ, ವೇದಾಧ್ಯಯನ, ತಪಸ್ಸುಗಳನ್ನು ಮಾಡುತ್ತಾ, ಇತರರ್ಯಾರೂ ಮಾಡದ ದೊಡ್ಡ ಕಾರ್ಯಗಳನ್ನು ಮಾಡಿದಂತೆ ತಿಳಿಯುತ್ತಿರುತ್ತಾರೆ. ಪ್ರಪಂಚದಲ್ಲಿ ಸಹ ಈ ನಾಲ್ಕು ಕಾರ್ಯಗಳೇ ದೈವಮಾರ್ಗದಲ್ಲಿ ದೊಡ್ಡ ಬೆಲೆಯುಳ್ಳ ಕಾರ್ಯಗಳಾಗಿ ಪ್ರಜೆಗಳು ಲೆಕ್ಕಿಸುತ್ತಿದ್ದಾರೆ. ಈ ನಾಲ್ಕು ಕಾರ್ಯಗಳನ್ನು ಮಹರ್ಷಿಗಳೆನ್ನುವವರು ಸಹ ಮಾಡುತ್ತಾ ಬಂದಿದ್ದಾರೆ. ಕೃತಯುಗದ ನಂತರ ಬಂದಿರುವ ತ್ರೇತಾಯುಗದಲ್ಲಿ (ತ್ರೈತಾಯುಗದಲ್ಲಿ) ತ್ರಿಕಾಲ ಜ್ಞಾನಿ, ಬ್ರಹ್ಮಜ್ಞಾನಿ, ದ್ರಾವಿಡ ಬ್ರಾಹ್ಮಣನು ಆದ ರಾವಣಬ್ರಹ್ಮ ಈ ನಾಲ್ಕು ಕಾರ್ಯಗಳನ್ನು ಪೂರ್ತಿಯಾಗಿ ವಿರೋಧಿಸಿದ್ದಾನೆಂದು, ನಡೆಯುತ್ತಿರುವ ಯಜ್ಞಗಳನ್ನು ಧ್ವಂಸ ಮಾಡಿಸಿದ್ದಾನೆಂದು ಕೇಳಿದ್ದೇವೆ. ಬ್ರಹ್ಮಜ್ಞಾನಿ ಎಂದು ಹೆಸರುವಾಸಿಯಾದ ಒಬ್ಬವ್ಯಕ್ತಿ ಹಾಗೆ ಏಕೆ ವಿರೋಧಿಸಿದ್ದಾನೆ, ಎಲ್ಲರಿಗೂ ದೊಡ್ಡ ಕಾರ್ಯಗಳಾಗಿ ಕಾಣಿಸಿರುವವು, ಇಂದಿಗೂ ಎಷ್ಟೋಜನ ಹೆಸರುವಾಸಿಯಾದ ಸ್ವಾಮೀಜೀಗಳು ಮಾಡುತ್ತಿರುವವು, ಆದ ಯಜ್ಞಗಳನ್ನು ಏಕೆ ಭಗ್ನ ಮಾಡಿದ್ದಾನೆಂದು ತಿಳಿಯುವುದಕ್ಕೆ, ನಾವು ಬ್ರಹ್ಮವಿದ್ಯಾಶಾಸ್ತ್ರವನ್ನು ಪ್ರಮಾಣವಾಗಿ ತೆಗೆದುಕೊಂಡು ನೋಡಬೇಕಾಗಿದೆ. ಶಾಸ್ತ್ರದಿಂದಲೇ ಯಾವುದು ಅಶಾಸ್ತ್ರೀಯ, ಯಾವುದು ಶಾಸ್ತ್ರೀಯವೆಂದು ತಿಳಿಯುತ್ತದೆ. ಮಾಡುತ್ತಿರುವ ವ್ಯಕ್ತಿಗಳನ್ನನುಸರಿಸಿ ಒಂದು ಕಾರ್ಯ ಸರಿಯಾದುದೊ, ಅಲ್ಲವೋ ಹೇಳಬಾರದು. ಮೊದಲೇ ನಿರ್ಮಿಸಲ್ಪಟ್ಟಿರುವ ಶಾಸ್ತ್ರವನ್ನನುಸರಿಸಿ ಒಂದು ಕಾರ್ಯ ಸರಿಯಾದುದೋ, ಅಲ್ಲವೋ ಹೇಳಬಹುದು. ಈಗ ಎಲ್ಲರೂ ದೊಡ್ಡದಾಗಿ ಆಚರಿಸುವ ಯಜ್ಞ, ತಪಸ್ಸು, ದಾನ, ವೇದಾಧ್ಯಯನ

ಗಳೆಂಬ ಕಾರ್ಯಗಳು ದೈವಮಾರ್ಗದಲ್ಲಿ ಜ್ಞಾನಿಗಳೆಂಬುವವರು ಮಾಡುವವು, ಆದ್ದರಿಂದ ಇವುಗಳನ್ನು ಷಟ್ ಶಾಸ್ತ್ರಗಳಲ್ಲಿನ ಬ್ರಹ್ಮವಿದ್ಯಾ ಶಾಸ್ತ್ರದಿಂದ ಬಿಡಿಸಿ ನೋಡಬೇಕಾಗಿದೆ.

ಪ್ರಸ್ತುತ ಕಾಲದಲ್ಲಿ ಬ್ರಹ್ಮವಿದ್ಯಾ ಶಾಸ್ತ್ರ ಯಾವುದು ಎಂದು ನೋಡಿದರೆ ಮೂರು ಗ್ರಂಥಗಳಲ್ಲಿ ಅದು ಕಾಣಿಸುತ್ತಿದೆ. ಹಿಂದುಗಳಿಗೆ (ಇಂದೂಗಳಿಗೆ) ಭಗವದ್ಗೀತೆಯಲ್ಲಿ, ಕ್ರೈಸ್ತರಿಗೆ ಬೈಬಲ್‌ನಲ್ಲಿ, ಮುಸ್ಲಿಮ್‌ರಿಗೆ ಖುರ್‌ಆನ್ ಗ್ರಂಥದಲ್ಲಿ ದೇವರಿಗೆ ಸಂಬಂಧಿಸಿದ ಬ್ರಹ್ಮವಿದ್ಯಾ ಶಾಸ್ತ್ರದ ಸೂತ್ರಗಳು ತಿಳಿಯುತ್ತಿವೆ. ಈಗ ನಾವು ಇಂದೂಗಳು (ಹಿಂದುಗಳು) ಆದ್ದರಿಂದ ಭಗವದ್ಗೀತಾಶಾಸ್ತ್ರವನ್ನು ನೋಡಬೇಕಾಗಿದೆ. ಭಗವದ್ಗೀತೆ ನೂರಕ್ಕೆ ನೂರುಪಾಲು ಬ್ರಹ್ಮವಿದ್ಯಾ ಶಾಸ್ತ್ರವಾದ್ದರಿಂದ, ಅದರಲ್ಲಿ ಮೊದಲಿನಿಂದ ಕೊನೆಯವರೆಗೂ ಪರಿಶೀಲಿಸಿ ನೋಡಿದರೆ, ವಿಶ್ವರೂಪ ಸಂದರ್ಶನ ಯೋಗವೆಂಬ ಅಧ್ಯಾಯದಲ್ಲಿ 48 ಮತ್ತು 53 ಶ್ಲೋಕಗಳಲ್ಲಿಯೂ, ಅದಕ್ಕಿಂತ ಮುಂದಿರುವ ಅಕ್ಷರ ಪರಬ್ರಹ್ಮ ಯೋಗದಲ್ಲಿ ಕೊನೆಯ 28ನೇ ಶ್ಲೋಕದಲ್ಲಿಯೂ ಬಾಹ್ಯಯಜ್ಞಗಳನ್ನು ಕುರಿತು, ವೇದಾಧ್ಯಯನವನ್ನು ಕುರಿತು, ದಾನಗಳನ್ನು, ತಪಸ್ಸುಗಳನ್ನು ಕುರಿತು ಹೇಳುವುದು ನಡೆದಿದೆ. ಅವುಗಳನ್ನು ಕೆಳಗೆ ವಿವರಿಸುತ್ತೇವೆ ನೋಡಿರಿ. ಮೊದಲು ಅಕ್ಷರ ಪರಬ್ರಹ್ಮ ಯೋಗದಲ್ಲಿನ 28ನೇ ಶ್ಲೋಕವನ್ನು ನೋಡೋಣ.

**28ನೇ ಶ್ಲೋ॥ ವೇದೇಷು ಯಜ್ಞೇಷು ತಪಸ್ಸು ಚೈವ ದಾನೇಷು ಯತ್ಪುಣ್ಯ ಫಲಂ ಪ್ರದಿಷ್ಟಮ್।**
**ಅತ್ಯೇತಿ ತತ್ಸರ್ವಮಿದಂವಿದಿತ್ವಾ ಯೋಗೀ ಪರಂಸ್ಥಾನ ಮುಪೈತಿ ಚಾದ್ಯಮ್॥**

**ಭಾವಾರ್ಥ :–** "ನಾನು ಹೇಳಿದ ಜ್ಞಾನವನ್ನು ತಿಳಿದವನು ವೇದಗಳಿಂದ, ಯಜ್ಞಗಳಿಂದ, ದಾನಗಳಿಂದ, ತಪಸ್ಸುಗಳಿಂದ ಬರುವ ಪುಣ್ಯ ಫಲಗಳನ್ನು ಅತಿಕ್ರಮಿಸಿದವನಾಗಿ, ಯೋಗಿಯಾಗಿ ಪರಮವಾದ ಮೋಕ್ಷಪದವನ್ನು ಪಡೆಯುತ್ತಾನೆ."

ಭಗವಂತನು ಹೇಳಿದ ಈ ಮಾತನ್ನು ಅನುಸರಿಸಿ ನೋಡಿದರೆ ನಮಗೆ ಅರ್ಥವಾಗುವ ವಿಷಯವೇನೆಂದರೆ! ವೇದಗಳಿಂದಾಗಲಿ, ಯಜ್ಞಗಳಿಂದಾಗಲಿ, ತಪಸ್ಸುಗಳಿಂದಾಗಲಿ, ದಾನಗಳಿಂದಾಗಲಿ ಪ್ರಪಂಚ ಸಂಬಂಧ ಫಲಿತವಾದ ಪುಣ್ಯ ಲಭಿಸುತ್ತದೆ. ಪಾಪಪುಣ್ಯಗಳು ಎರಡೂ ಪ್ರಪಂಚ ಸಂಬಂಧ ಫಲಿತಗಳೆಂದು ಜ್ಞಾಪಕ ಇಟ್ಟುಕೊಳ್ಳಬೇಕು. ಈ ಎರಡು ಫಲಿತಗಳಿಂದ ಕಷ್ಟಸುಖಗಳು ಲಭಿಸುತ್ತವೆಂದು ಹೇಳಿಕೊಂಡಿದ್ದೇವೆ. ಪ್ರಪಂಚ ಸಂಬಂಧ ಫಲಿತಗಳಿಗಿಂತ ದೊಡ್ಡದು ದೈವಸಂಬಂಧ ಫಲಿತ. ದೈವಸಂಬಂಧ ಧರ್ಮಾ ಧರ್ಮಗಳಿಂದ ಜನ್ಮ, ಮೋಕ್ಷಗಳು ಉಂಟಾಗುತ್ತಿರುತ್ತವೆ. ಕಷ್ಟವಿದ್ದರೆ ಸುಖ ಇರುವುದಿಲ್ಲ. ಹಾಗೆ ಜನ್ಮ ಇದ್ದರೆ ಮೋಕ್ಷ ಇರುವುದಿಲ್ಲ. ಕಷ್ಟಸುಖಗಳು, ಜನ್ಮ ಮೋಕ್ಷಗಳು ಪ್ರಕೃತಿ ಪರಮಾತ್ಮನವೊಂದು ಬೇರೆಬೇರೆ ಫಲಿತಗಳು. ಪ್ರಕೃತಿ ಸಂಬಂಧವಾದವು ಕಷ್ಟಸುಖಗಳು, ಇವು ಮನುಷ್ಯ ಮಾಡುವ ಪಾಪಪುಣ್ಯಗಳಿಂದ ಬರುತ್ತಿವೆ. ಹಾಗೆಯೇ ದೈವಸಂಬಂಧವಾದವು ಜನ್ಮ ಮೋಕ್ಷಗಳು. ಇವು ಮನುಷ್ಯ ಆಚರಿಸುವ ಧರ್ಮಗಳನ್ನನುಸರಿಸಿ, ಅಧರ್ಮಗಳನ್ನನುಸರಿಸಿ ಲಭಿಸುತ್ತಿವೆ. ಈ ಶ್ಲೋಕದಲ್ಲಿ ಹೇಳಿದ ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಕಾರ್ಯಗಳು ಪ್ರಕೃತಿಗೆ ಸಂಬಂಧಿಸಿರುವವಾ ಅಥವಾ ಪರಮಾತ್ಮಕ್ಕೆ ಸಂಬಂಧಿಸಿರುವವಾ ಎಂದು ನೋಡಿದರೆ, ದೈವಕ್ಕೆ ಸಂಬಂಧಿಸಿದ ಕಾರ್ಯಗಳಾಗಿಯೇ ಎಲ್ಲರೂ ಮಾಡುತ್ತಿದ್ದಾರೆ. ಆದರೆ ಗೀತೆಯಲ್ಲಿ ಹೇಳಿದಂತೆ ಈ ಕಾರ್ಯಗಳಿಗೆ ಪುಣ್ಯಫಲಿತ ಬರುತ್ತದೆ ಎಂದು, ಪುಣ್ಯದಿಂದ ಸುಖಗಳನ್ನು ಅನುಭವಿಸುವುದಕ್ಕೆ ಜನ್ಮ ಉಂಟಾಗುತ್ತಿದೆ ಎಂದು ಹೇಳಬಹುದು. ಭಗವದ್ಗೀತೆಯಲ್ಲಿ ಈ ಕಾರ್ಯಗಳನ್ನು ಪ್ರಕೃತಿ ಸಂಬಂಧಿಸಿದ ಕಾರ್ಯವಾಗಿ ಪ್ರಕಟಿಸಿದ್ದಾರಾ ಎಂದು ನೋಡಿದರೆ, ಮೋಕ್ಷ ಅಲ್ಲದೆ ಜನ್ಮವನ್ನು ಉಂಟುಮಾಡುವ ಅಧರ್ಮ ಕಾರ್ಯಗಳಾಗಿ ಕಾಣಿಸುತ್ತಿವೆ. ಈ ಮಾತು ಎಲ್ಲರಿಗೂ ಆಶ್ಚರ್ಯವಾಗಿಯೇ ಇರುವುದರಿಂದ ಇನ್ನೂ ಆಳವಾಗಿ ನೋಡಬೇಕಾದ ಅವಶ್ಯಕತೆ ಇದೆ.

ದೈವಮಾರ್ಗದಲ್ಲಿ ಧರ್ಮಕಾರ್ಯಗಳಿಂದ ಬರುವ ಫಲಿತ ಮೋಕ್ಷ. ಮೋಕ್ಷ ಎಂದರೆ ಜನ್ಮದಿಂದ ಬಿಡುಗಡೆಯಾಗಿ (ಜನ್ಮಿಸಿದ ಶರೀರದಿಂದ ಹೊರಗೆ ಬಂದು) ದೇವರಲ್ಲಿ ಐಕ್ಯವಾಗಿ ಹೋಗುವುದು. ಯಾವಾಗಾದರೆ ಜೀವಿಯು ದೇವರಲ್ಲಿ ಐಕ್ಯವಾಗಿ ಹೋಗುತ್ತಾನೋ, ಆಗ ಅಲ್ಲಿಯವರೆಗೂ ತಿಳಿಯದ ದೇವರು ತಿಳಿಯುತ್ತಾನೆ. ಜೀವಿಗೆ ದೇವರು ತಿಳಿಯಲ್ಪಟ್ಟಾಗ ನಂತರ ಜೀವಿ ಎಂಬುವವನಿರುವುದಿಲ್ಲ. ಅವನು ದೇವರಲ್ಲಿ ಸೇರಿಹೋಗಿ ಶರೀರದಿಂದ, ಕರ್ಮದಿಂದ ವಿಮುಕ್ತನಾಗುತ್ತಿದ್ದಾನೆ. ಕರ್ಮದಿಂದ ಬಿಡುಗಡೆಯನ್ನು ಹೊಂದುವುದನ್ನೇ ಮೋಕ್ಷ ಎನ್ನುತ್ತಿದ್ದೇವೆ. ಧರ್ಮಗಳಿಂದ ಮೋಕ್ಷ ಇಲ್ಲವೇ ದೈವದರ್ಶನ ಲಭಿಸಿದರೆ ಅಧರ್ಮಗಳಿಂದ ಜನ್ಮವೇ ಲಭಿಸುತ್ತಿದೆ. ಅಧರ್ಮಗಳಿಂದ ಲಭಿಸುವ ಜನ್ಮದಲ್ಲಿ, ಅಧರ್ಮಗಳಿಂದ ಲಭಿಸುವ ಪುಣ್ಯದಿಂದ ಸುಖಗಳು ಲಭಿಸುತ್ತಿವೆ. ಆ ವಿಷಯವನ್ನೇ ಮೇಲಿನ ಶ್ಲೋಕದಲ್ಲಿ "ವೇದ, ಯಜ್ಞ, ದಾನ, ತಪಸ್ಸುಗಳಿಂದ ಲಭಿಸುವ ಪುಣ್ಯಫಲಗಳಿಗಿಂತ, ನನ್ನ ಜ್ಞಾನ ಧರ್ಮ ತಿಳಿಯುವುದರಿಂದ ಅವನು ಯೋಗಿಯಾಗಿ ಮೋಕ್ಷವನ್ನು ಹೊಂದುತ್ತಿದ್ದಾನೆ." ಎಂದು ಹೇಳಿದ್ದಾನೆ. ಇದರಿಂದ ಯಜ್ಞ, ದಾನ, ತಪಸ್ಸು, ವೇದಗಳು ದೈವಮಾರ್ಗದಲ್ಲಿರುವ ಅವು ಅಧರ್ಮಗಳೆಂದು, ಯೋಗ ಎನ್ನುವುದು ಧರ್ಮ ಎಂದು ತಿಳಿಯುತ್ತಿದೆ. ವೇದ, ಯಜ್ಞ, ದಾನ, ತಪಸ್ಸುಗಳು ನಾಲ್ಕು ಅಧರ್ಮಗಳೆಂದು, ಅವುಗಳಿಂದ ದೇವರನ್ನು ತಿಳಿಯುವುದಕ್ಕೆ ಸಾಧ್ಯವಿಲ್ಲವೆಂದು ವಿಶ್ವರೂಪ ಸಂದರ್ಶನ ಯೋಗದಲ್ಲಿ 48, 53ನೇ ಶ್ಲೋಕಗಳಲ್ಲಿ ಹೇಳಲಾಗುತ್ತಿದೆ, ನೋಡಿರಿ.

**48ನೇ ಶ್ಲೋ॥ : ನವೇದಯಜ್ಞಾಧ್ಯಯನೈರ್ನದಾನೈರ್ನಚಕ್ರಿಯಾಭಿರ್ನತಪೋಭಿರುಗ್ರೈಃ ।**
**ಏವಂರೂಪ ಶ್ಯಕ್ಯಅಹಂ ನೃಲೋಕೇ ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ॥**

**ಭಾವಾರ್ಥ :–** ಓ ಅರ್ಜುನಾ! ವೇದಗಳು ಓದುವುದರಿಂದ, ಯಜ್ಞಗಳು ಮಾಡುವುದರಿಂದ ದಾನಗಳನ್ನು ಕೊಡುವುದರಿಂದ, ಉಗ್ರವಾದ ತಪಸ್ಸು ಮಾಡುವುದರಿಂದ ಈಗ ನೀನು ನೋಡಿದ ಈ ರೂಪವನ್ನು ನೋಡುವುದಕ್ಕೆ ಶಕ್ಯವಲ್ಲ.

ನಾನು ಹೇಳಿದ ಧರ್ಮಗಳಿಂದ ದೇವರು ತಿಳಿಯುತ್ತಾನೆ ಎಂದು ಅಕ್ಷರ ಪರಬ್ರಹ್ಮಯೋಗ ಕೊನೆಯ ಶ್ಲೋಕದಲ್ಲಿ ಹೇಳಿದ ಭಗವಂತನು, ಈ ನಾಲ್ಕು ಕಾರ್ಯಗಳಿಂದ ದೇವರನ್ನು ನೋಡುವುದಕ್ಕೆ ಶಕ್ಯವಲ್ಲ ಎಂದು ಹೇಳುವುದು ನಡೆದಿದೆ. ಇದರಿಂದ ಭಗವಂತನು ಈ ನಾಲ್ಕು ಕೆಲಸಗಳನ್ನು ಅಧರ್ಮ ಕಾರ್ಯಗಳಾಗಿ ಪ್ರಕಟಿಸಿದಂತಾಗಿದೆ. ಅಧರ್ಮಕಾರ್ಯಗಳಿಂದ ಸುಖಗಳಿಗೆ ಕಾರಣವಾದ ಪುಣ್ಯ ಜನ್ಮ ಬರುತ್ತಿದೆ ಎಂದು, ಮೋಕ್ಷ ಲಭಿಸುವುದಿಲ್ಲ ವೆಂದು ಅರ್ಥವಾಗುತ್ತಿದೆ. ಇದೇ ವಿಷಯವನ್ನೇ ದೃಢಪಡಿಸುತ್ತಾ 53ನೇ ಶ್ಲೋಕದಲ್ಲಿ ಸಹ ಹೇಳುವುದು ನಡೆದಿದೆ ನೋಡಿರಿ.

***53ನೇ ಶ್ಲೋ॥ ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ।***
***ಶಕ್ಯ ಏವಂ ವಿಧೋ ದ್ರಷ್ಟುಂ ದೃಷ್ಟವಾ ನಸಿ ಮಾಂ ಯಥಾ ॥***

**ಭಾವಾರ್ಥ :–** ವೇದಗಳಿಂದಾಗಲಿ, ತಪಸ್ಸುಗಳಿಂದಾಗಲಿ, ದಾನಗಳಿಂದಾಗಲಿ, ಯಜ್ಞಗಳಿಂದಾಗಲಿ ನನ್ನ ರೂಪ ನೋಡುವುದಕ್ಕೆ ಸಾಧ್ಯವಾಗುವುದಿಲ್ಲ. ಈಗ ನೀನು ನೋಡಿದ ವಿಶ್ವರೂಪ ಈ ನಾಲ್ಕು ಕಾರ್ಯಗಳಿಂದ ಶಕ್ಯವಲ್ಲ.

48ನೇ ಶ್ಲೋಕ ವಿಶ್ವರೂಪದಿಂದ ಇರುವಾಗಲೇ ಹೇಳಿರುವುದಾಗಿದ್ದು, 53ನೇ ಶ್ಲೋಕ ವಿಶ್ವರೂಪವನ್ನು ಬಿಟ್ಟು ಸಾಧಾರಣ ಕೃಷ್ಣನಾಗಿರುವಾಗ ಹೇಳಿರುವುದು. ಈ ಎರಡು ಶ್ಲೋಕಗಳಲ್ಲಿಯೂ ಒಂದೇ ಭಾವ ತಿಳಿಸಲಾಗಿದೆ. ಈ ನಾಲ್ಕು ಕಾರ್ಯಗಳಿಂದ ನಾನು ಯಾವಮಾತ್ರವೂ ತಿಳಿಯುವುದಿಲ್ಲವೆಂದು ಹೇಳುವುದಲ್ಲದೆ, ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ 25ನೇ ಶ್ಲೋಕದಲ್ಲಿ ದೇವತೆಗಳನ್ನು ಪೂಜಿಸುವವರಾಗಲಿ, ಪಿತೃ ದೇವತೆಗಳನ್ನು ಪೂಜಿಸುವವರಾಗಲಿ, ಜೀವಿಗಳಾದ ಗಿಡಗಳನ್ನು, ಪ್ರಾಣಿಗಳನ್ನು, ಮನುಷ್ಯರನ್ನು ಪೂಜಿಸುವವರಾಗಲಿ ಮರಣಿಸಿದ ನಂತರ ಯಾರನ್ನು ಪೂಜಿಸಿದ್ದಾರೋ, ಅವರ ಹತ್ತಿರಕ್ಕೆ ಹೋಗುತ್ತಾರೆ ಹೊರತು ನನ್ನ ಹತ್ತಿರಕ್ಕೆ ಬರಲಾರರು ಎಂದಿದ್ದಾನೆ. ಭಗವಂತನು ಹೇಳಿದ ಈ ಮಾತುಗಳನ್ನನುಸರಿಸಿ ಶಾಸ್ತ್ರಪ್ರಮಾಣವಾಗಿ ದೇವರ ಹತ್ತಿರಕ್ಕೆ ಸೇರಿಸದ

ಕಾರ್ಯಗಳೆಲ್ಲವೂ, ಅಧರ್ಮಯುತಗಳೆಂದು ಅರ್ಥವಾಗುತ್ತಿದೆ. ದೇವರ ಹತ್ತಿರಕ್ಕೆ ಸೇರಿಸುವವು ಮಾತ್ರವೇ ಧರ್ಮಗಳು ಎಂದು ತಿಳಿಯುತ್ತಿದೆ. ಯಜ್ಞಗಳ ಮೂಲಕ ಇತರ ದೇವತೆಗಳನ್ನು ಪೂಜಿಸುತ್ತಿದ್ದಾರೆ. ಆದ್ದರಿಂದ ಎಲ್ಲಾ ವಿಧಗಳ ಆರಾಧನೆ ಗಳನ್ನು ಯಜ್ಞಗಳ ಕೆಳಗೆ ಸೇರಿಸಿ ಹೇಳಬಹುದು. ಇವೆಲ್ಲವೂ ಅಧರ್ಮಗಳೆಂದು ಹೇಳಿದರೂ ದೇವರ ಮಾತನ್ನು ಲೆಕ್ಕಿಸದೆ ತಮ್ಮ ಇಷ್ಟಾನುಸಾರ ಅನ್ಯದೇವತಾರಾಧನೆ ಮಾಡುವವರನ್ನು, ಯಜ್ಞಗಳು ಮಾಡುವವರನ್ನು, ತಪಸ್ಸು ಮಾಡುವವರನ್ನು, ಅಧರ್ಮಯುತರೆಂದು ದೇವರು ಲೆಕ್ಕಿಸುತ್ತಿದ್ದಾನೆ. ಭೂಮಿಮೇಲೆ ಅಧರ್ಮಗಳು ಇರಬಾರದೆಂದು ಅದೇ ಕೆಲಸವಾಗಿ ದೇವರು ಅವತರಿಸಿ ಧರ್ಮಗಳನ್ನು ತಿಳಿಸಿದಾಗ, ದೇವರ ಉದ್ದೇಶವನ್ನೂ, ಶ್ರಮವನ್ನು ಗುರುತಿಸದೆ ಅದೇ ಕೆಲಸವಾಗಿ ಅಧರ್ಮಗಳನ್ನು ಆಚರಿಸಿದರೇ ದೇವರಿಗೆ ಕೋಪ ಬರುವುದಿಲ್ಲವಾ! ದೇವರು ಭಗವಂತನಾಗಿ ಶರೀರವನ್ನು ಧರಿಸಿ ಬಂದು ಭೂಮಿಮೇಲೆ ಅನೇಕ ಅವಮಾನಗಳನ್ನು ಸಹಿಸಿಕೊಂಡು ಕೆಲವು ವರ್ಷಗಳ ಕಾಲ ತನ್ನ ಜ್ಞಾನವನ್ನೂ, ಧರ್ಮಗಳನ್ನೂ ತಿಳಿಸಿದರೆ, ಆತನ ಶ್ರಮವನ್ನು ಸ್ವಲ್ಪವೂ ಲೆಕ್ಕಮಾಡದೆ, ದೇವರು ಹೇಳಿದ್ದಾನೆ ಎಂಬ ಗೌರವವೂ ಸಹ ಇಲ್ಲದಂತೆ, ಧರ್ಮಗಳ ಕಡೆ ಯಾವ ಮಾತ್ರವು ನೋಡದಂತೆ, ಅಧರ್ಮಗಳನ್ನು ಆಚರಿಸಿದರೆ ದೇವರನ್ನು ಹೀನವಾಗಿ ನೋಡಿದಂತಲ್ಲವೆ! ಅಂತಹದರಲ್ಲಿ ದೇವರಿಗೆ ಕೋಪ ಬರುವುದಿಲ್ಲವಾ! ಬರುತ್ತದೆ.

ಆತನ ಕೋಪ ಮನುಷ್ಯರ ಕೋಪದಂತೆ ಇರುವುದಿಲ್ಲ. ಆತನು ಈಗ ಯಾರ ಮೇಲೂ ಕೋಪಮಾಡಿಕೊಳ್ಳುವುದಿಲ್ಲ. ಸೃಷ್ಟ್ಯಾದಿಯಲ್ಲಿಯೇ ಇಂತ ಹವರಿಗೆ ಇದು, ಈ ಕೆಲಸ ಮಾಡಿದವರಿಗೆ ಈ ಶಿಕ್ಷೆಯೆಂದು ಮೊದಲೇ ತೀರ್ಪು ಮಾಡಿಟ್ಟಿದ್ದಾನೆ. ಆ ತೀರ್ಪುಗಳನ್ನು ಶಾಸ್ತ್ರೀಯವಾಗಿ ನಿರ್ಣ ಯಿಸಿಟ್ಟಿದ್ದಾನೆ. ಹಾಗೆ ಸೃಷ್ಟ್ಯಾದಿಯಲ್ಲಿ ನಿರ್ಣಯಿಸಿದ ತೀರ್ಪಿನ ಪ್ರಕಾರವೇ ಈ ದಿನ ತಪ್ಪು ಮಾಡಿದವರಿಗಾದರೂ ಶಿಕ್ಷೆಗಳಿರುತ್ತವೆ. ದೇವರು ಶಾಸ್ತ್ರಬದ್ದವಾಗಿ ನಿರ್ಣಯಿಸಿದ ತೀರ್ಪಿನಿಂದ ಯಾರೂ ಹೊರಬೀಳುವುಕ್ಕೆ ಅವಕಾಶವಿಲ್ಲ. ಈ ದಿನ ಮನುಷ್ಯ ತನ್ನ ಇಷ್ಟಬಂದ ಹಾಗೆ ಅಭ್ಯಾಸಗಳು ಕಲಿತುಕೊಂಡು, ನನ್ನನ್ನು

ಹೊರತುಪಡಿಸಿ ಯಾರನ್ನು ಆರಾಧಿಸಬೇಡ ಎಂದು ದೇವರು ಹೇಳಿದ ಮಾತಿಗೆ, ಹಾಗೆ ಹೇಳಿದರೆ ನಮ್ಮ ಮನೋಭಾವಗಳಿಗೆ ತೊಂದರೆಯಾಗುತ್ತದೆ ಎಂದರೂ, ಇದು ನಮ್ಮ ಸನಾತನಧರ್ಮವೆಂದು ಅರಚಿದರೂ ದೇವರು ಒಪ್ಪಿಕೊಳ್ಳುವುದಿಲ್ಲ. ನಾನು ಸನಾತನನು ಸನಾತನನಾಗಿರುವ ನನ್ನನ್ನು ಆರಾಧಿಸುವುದು ಸನಾತನ ಧರ್ಮವಾಗುತ್ತದಾಗಲಿ, ನಿನ್ನೆ ಈ ದಿನ ನೀನು ಅಭ್ಯಾಸಗಳು ಮಾಡಿಕೊಂಡಿರುವವು ಸನಾತನ ಧರ್ಮಗಳು ಹೇಗಾಗುತ್ತವೆಂದು ದೇವರು ಪ್ರಶ್ನಿಸುತ್ತಾನೆ. ಅಷ್ಟೇ ಅಲ್ಲದೆ ನಿನಗೆ ಮನಸ್ಸನ್ನು, ಬುದ್ಧಿಯನ್ನು ಕೊಟ್ಟಿರುವುದು ನಾನು, ಶರೀರದಲ್ಲಿರುವ ಮನೋಬುದ್ಧಿಗಳು ನನ್ನವೇ ಆದಾಗ, ನಿನ್ನ ಮನೋಭಾವವೇನೋ ಅದು ನನ್ನ ಮೇಲಿರಬೇಕಾಗಲಿ, ನಿನ್ನ ಇಷ್ಟಬಂದ ದೇವತೆಗಳ ಮೇಲೆ ಇಟ್ಟುಕೊಂಡು ಅವು ಬಿಡಬೇಕೆಂದು ಒಳ್ಳೆಯ ಮಾತುಗಳು ಹೇಳಿದರೆ, ನಮ್ಮ ಮನೋಭಾವಕ್ಕೆ ಆತಂಕವಾಗುತ್ತದೆ ಎನ್ನುವುದು ಪತ್ನಿ ನನ್ನ ಮನಸ್ಸು ಬೇರೆಯವನ ಮೇಲಿದೆ ಎಂದು ಪತಿಯ ಹತ್ತಿರ ಹೇಳಿದಂತೆ ಅಲ್ಲವೇ ಎಂದು ದೇವರು ಪ್ರಶ್ನಿಸುತ್ತಾನೆ. ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ 34ನೇ ಶ್ಲೋಕದಲ್ಲಿ ಈ ವಿಧವಾಗಿ ಅನ್ನುತ್ತಿದ್ದಾನೆ ನೋಡಿ.

**34ನೇ ಶ್ಲೋ॥ ಮನ್ಮನಾಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇ ವೈಷ್ಯಸಿ ಯುಕ್ತ್ವೈವ ಮಾತ್ಮಾನಂ ಮತ್ಪರಾಯಣಃ ॥**

**ಭಾವಾರ್ಥ :–** "ನಿನ್ನ ಭಕ್ತಿಯನ್ನು ನನ್ನ ಮೇಲೆಯೇ ತೋರಿಸು, ನಿನ್ನ ಮನಸ್ಸನ್ನು ನನ್ನ ಮೇಲೆ ಇಡು, ನೀನು ನನ್ನನ್ನೇ ನಮಸ್ಕರಿಸು, ನೀನು ನನ್ನನ್ನೇ ಪೂಜಿಸು, ನನ್ನನ್ನೇ ಆಶ್ರಯಿಸು ನನ್ನನ್ನೇ ಹೊಂದುತ್ತೀಯಾ." ಎಂದು ಹೇಳಿರುವಾಗ! ಮನುಷ್ಯ ತನ್ನ ಇಷ್ಟಬಂದವರನ್ನು ಪೂಜಿಸುವುದು ನಮಸ್ಕರಿಸುವುದು ಮಾಡುತ್ತಾ, ಯಾರಾದರೂ ಅವರಿಗೆ ಒಳ್ಳೆಯದನ್ನು ಬಯಸಿ ದೇವರನ್ನು ಹೊರತು ಇತರರನ್ನು ಪೂಜಿಸಬೇಡ, ನಮಸ್ಕರಿಸಬೇಡ ಅಂದರೆ, ಮೂತಿ ತಿರುಗಿಸಿಕೊಂಡು ಹಾಗೆ ಹೇಳಿದರೆ ನಮ್ಮ ಮನೋಭಾವಗಳಿಗೆ ಆತಂಕವಾಗುತ್ತದೆ ಎಂದರೆ, ಜೇಬು ಕಳ್ಳತನಗಳಿಗೆ ಅಭ್ಯಾಸ ಆದವನನ್ನು ನೋಡಿ ಪೋಲೀಸ್ "ಕಳ್ಳತನ ಮಾಡುವುದು

ಒಳ್ಳೆಯದು ಅಲ್ಲ, ಕೆಲಸ ಮಾಡಿ ಬದುಕು" ಎಂದು ಹೇಳಿದರೆ ಕಳ್ಳ "ಹಾಗೆ ಹೇಳಿದರೆ ನಮ್ಮ ಮನೋಭಾವಗಳಿಗೆ ಆತಂಕವಾಗುತ್ತದೆ" ಎಂದನಂತೆ. ಪೋಲೀಸ್ ಆ ಮಾತು ಕೇಳಿ "ನಿನ್ನ ಮನೋಭಾವಗಳು ನಿನ್ನ ಕೆಳಗಿನ ಜೇಬಿನಲ್ಲಿ ಇವೆಯಾ, ಮೇಲಿನ ಜೇಬಿನಲ್ಲಿ ಇವೆಯಾ" ಎಂದು ಕೇಳಿದನಂತೆ. ಆ ವಿಧವಾಗಿ ಇದು ದೈವಜ್ಞಾನವಲ್ಲವೆ! ನಮ್ಮ ಒಳ್ಳೆಯದಕ್ಕೆ ಹೇಳುತ್ತಿದ್ದಾರಲ್ಲವೆ ಎಂದು ಅಂದು ಕೊಳ್ಳದಂತೆ, ಇದನ್ನು ಬರೆದ ನಮಗೂ ಸಹ ವಿರುದ್ಧವಾಗಿ ಮಾತನಾಡುವವರು ಇರಬಹುದು. ನೀವು ನನ್ನನ್ನು ಏನೆಂದುಕೊಂಡರು ಒಳ್ಳೆಯದೆ ಆಗಲಿ, ನೀವು ಮಾತ್ರ ದೇವರ ತೀರ್ಪನ್ನು ಶಿಕ್ಷೆಯನ್ನು ಜ್ಞಾಪಕದಲ್ಲಿಟ್ಟುಕೊಳ್ಳಿರೆಂದು ಹೇಳುತ್ತಿದ್ದೇನೆ. ದೇವರು ಮನುಷ್ಯನಿಗೆ ಜ್ಞಾನವನ್ನು ತಿಳಿಸುವುದಕ್ಕೋಸ್ಕರ ಹಿಂದುಗಳಾ (ಇಂದುಗಳಾ) ದ ನಮಗೆ ಭಗವದ್ಗೀತೆ ಗ್ರಂಥವನ್ನು ಕೊಟ್ಟಿದ್ದಾನೆ. ಇದು ನನ್ನ ಶಾಸ್ತ್ರ ಎಂದು (ಬ್ರಹ್ಮ ವಿದ್ಯಾಶಾಸ್ತ್ರವೆಂದು) ಹೇಳಿದ್ದಾನೆ. ಆದರೆ ಮನುಷ್ಯ ದೇವರು ಕೊಟ್ಟಿರುವ ಗ್ರಂಥವನ್ನು (ಶಾಸ್ತ್ರವನ್ನು) ಬಿಟ್ಟು ಯಾವನೋ ಕೆಲಸಕ್ಕೆ ಬಾರದವನು ಹೇಳಿದ ಬೋಳು ಸಾಧನೆಯನ್ನೋ ಇಲ್ಲವೆ ಕೆಲಸಕ್ಕೆ ಬಾರದ ಸಾಧನೆಯನ್ನೋ ಹಿಡಿದುಕೊಂಡು ಇದೇ ಜ್ಞಾನ, ಇದೇ ಸಾಧನೆ ಎಂದರೆ ದೇವರಿಗೆ ಕೋಪ ಬರುವುದಿಲ್ಲವೆ? ಅಂತವರನ್ನು ಕುರಿತು ಭಗವಂತನು ತನ್ನ ಗೀತೆಯಲ್ಲಿ ಏನನ್ನುತ್ತಿದ್ದಾನೋ, ದೈವಾಸುರ ಸಂಪದ್ವಿಭಾಗಯೋಗದಲ್ಲಿ 23ನೇ ಶ್ಲೋಕವನ್ನು ನೋಡೋಣ.

**23ನೇ ಶ್ಲೋ॥ ಯಃಶ್ಯಾಸ್ತ್ರವಿಧಿ ಮುತ್ಸೃಜ್ಯ ವರ್ತತೇ ಕಾಮ ಕಾರತಃ ।**
**ನ ಸ ಸಿದ್ಧಿ ಮವಾಪ್ನೋತಿ ನ ಸುಖಂ ನಪರಾಂ ಗತಿಮ್ ॥**

**ಭಾವಾರ್ಥ :–** "ಬ್ರಹ್ಮವಿದ್ಯಾ ಶಾಸ್ತ್ರ ವಿಧಾನವನ್ನು ಬಿಟ್ಟು ಆಸೆಗಳಿಂದ ಇಷ್ಟಬಂದ ಹಾಗೆ ಪ್ರವರ್ತಿಸುವವನು ಸುಖವನ್ನು ಹೊಂದಲಾರನು, ಏನನ್ನು ಸಾಧಿಸಲಾರನು, ಮೋಕ್ಷವನ್ನು ಹೊಂದಲಾರನು" ಎಂದು ಹೇಳಿದ್ದಾರೆ. ಬ್ರಹ್ಮವಿದ್ಯಾ ಶಾಸ್ತ್ರವನ್ನು ಅಲ್ಲಗಳೆದು, ನನ್ನದು ಇಂತಹ ಸಿದ್ಧಾಂತವೆಂದೋ, ನನ್ನದು ಇಂತಹ ಸಾಧನೆ ಎಂದೋ, ನನ್ನದು ಇಂತಹ ಪೀಠವೆಂದೊ, ನನ್ನದು ಇಂತಹ ಆರಾಧನೆ

ಎಂದೋ, ನನ್ನದು ಇಂತಹ ಮತವೆಂದೋ, ಇಂತಹ ಸಂಪ್ರದಾಯವೆಂದೋ, ಹೀಗೆ ಎಷ್ಟು ಹೇಳಿಕೊಂಡರೂ, ಪ್ರಜೆಗಳ ದೃಷ್ಟಿಯಲ್ಲಿ ದೊಡ್ಡ ಸ್ವಾಮಿಯಾಗಿ ಹೆಸರುವಾಸಿಯಾದ, ಎಂತಹವನಾದರೂ ದೇವರ ದೃಷ್ಟಿಯಲ್ಲಿ ಅಪರಾದಿಯೇ ಆಗುತ್ತಾನೆ. ಅಂತಹವನಿಗಾಗಲಿ, ಅಧರ್ಮಗಳನ್ನು ಆಚರಿಸುವ ಎಂತಹವನಿಗಾಗಲಿ ಶಿಕ್ಷೆ ತಪ್ಪವುದಿಲ್ಲ. ಶಿಕ್ಷೆ ಹೇಗಿರುತ್ತದೋ ಉದಾಹರಣೆಗೆ ಗೀತೆಯಲ್ಲಿ ದೈವಾಸುರ ಸಂಪದ್ವಿಭಾಗಯೋಗವೆಂಬ ಅಧ್ಯಾಯದಲ್ಲಿ 19, 20 ಶ್ಲೋಕಗಳನ್ನು ಒಂದುಸಲ ನೋಡೋಣ.

***19ನೇ ಶ್ಲೋ॥ ತಾ ನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್***
***ಕ್ಷಿಪಾ ಮ್ಯಜಸ್ರ ಮಶುಭಾ ನಾ ಸುರೀಷ್ವೇವ ಯೋನಿಷು ॥***

**ಭಾವಾರ್ಥ :–** ಕ್ರೂರತ್ವದಿಂದ ಕೂಡಿಕೊಂಡವರನ್ನು, ಅಸೂಯೆ ತುಂಬಿದವರನ್ನು, ಒಳ್ಳೆಯದನ್ನು ದೂಷಿಸುವವರನ್ನು, ನರರಲ್ಲಿ ಅಧಮರಾದವರನ್ನು ಅಸುರ ಗರ್ಭಗಳಲ್ಲಿ ಹುಟ್ಟುವಂತೆ ಮಾಡಿ, ಸಂಸಾರ ದುಃಖಗಳನ್ನು ಹೊಂದುವಂತೆ ಮಾಡುತ್ತೇನೆ.

***20ನೇ ಶ್ಲೋ॥ ಆಸುರೀಂ ಯೋನಿ ಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।***
***ಮಾ ಮಪ್ರಾಪ್ಯೈವ ಕೌಂತೇಯ! ತತೋ ಯಾನ್ತ್ಯಧಮಾಂ ಗತಿಮ್ ॥***

**ಭಾವಾರ್ಥ :–** "ಅಸುರ ಯೋನಿಗಳಲ್ಲಿ ಜನ್ಮಿಸುವವರು ಜನ್ಮ ಜನ್ಮಕ್ಕೂ ಅಜ್ಞಾನಿಗಳಾಗುತ್ತಾ, ನನ್ನನ್ನು ತಿಳಿಯುವ ಜ್ಞಾನದ ದಡ ಯಾವ ಮಾತ್ರವೂ ಲಭಿಸದೆ ಅಷ್ಟಕ್ಕಷ್ಟು ಅಧೋಗತಿಗೆ ಹೋಗುತ್ತಿರುತ್ತಾರೆ."

ಇಲ್ಲಿಯವರೆಗೂ ಶಿಕ್ಷೆ ತಪ್ಪದು ಎಂದು ಹೇಳುತ್ತಾ ಬಂದಿದ್ದೇವಾಗಲಿ ಶಿಕ್ಷೆ ಹೇಗಿರುತ್ತದೋ ಹೇಳಿಕೊಳ್ಳಲಿಲ್ಲ. ಆದರೆ ಈಗ ದೇವರು ಹೇಳಿದ ಮಾತುಗಳಲ್ಲಿಯೇ ಶಿಕ್ಷೆ ವಿಷಯ ಸೂಚಾಯವಾಗಿ ತಿಳಿದಿದೆ. ರಾಕ್ಷಸ ಗುಣಗಳಿರುವವರ ಗರ್ಭಗಳಲ್ಲಿ ಹುಟ್ಟಿ ದುಃಖಗಳನ್ನು ಹೊಂದುವುದೆ ಅಲ್ಲದೆ ಕಾಲ ಕಳೆದಂತೆಲ್ಲಾ, ಜನ್ಮಗಳು ಬದಲಾದಂತೆಲ್ಲಾ ಜನ್ಮಜನ್ಮಕ್ಕೂ ಸ್ವಲ್ಪ ಅಧೋಗತಿಗೆ

ಹೋಗುತ್ತಿರುತ್ತಾರೆಂದು, ಅಂತಹವರಿಗೆ ದೇವರನ್ನು ತಿಳಿದುಕೊಳ್ಳುವ ಜ್ಞಾನದ ದಡ ಮಾತ್ರ ಸಿಗುವುದಿಲ್ಲವೆಂದು ಹೇಳಲಾಗಿದೆ ಅಲ್ಲವೆ! ಇದನ್ನು ಕೇಳಿದ ನಂತರ ಈಗೊಂದು ಪ್ರಶ್ನೆ ಬರುತ್ತದೆ. ಅದೇನೆಂದರೆ! ರಾಕ್ಷಸ ಯೋನಿಗಳಲ್ಲಿ ಹುಟ್ಟಿದವರು ಜನ್ಮಜನ್ಮಕ್ಕೂ ಜ್ಞಾನದ ದಡ ಸಿಗದಂತೆ ಕೆಳಗಿನ ಸ್ಥಿತಿಗೆ ಇಳಿಜಾರಿ ಹೋಗುತ್ತಿರುತ್ತಾರೆಂದು ಹೇಳಿದ್ದಾರೆ ಅಲ್ಲವೆ! ಅಧರ್ಮಗಳನ್ನು ಆಚರಿಸಿ ಶಿಕ್ಷೆಯನ್ನು ಹೊಂದಿದವನು ಎಷ್ಟು ಜನ್ಮಗಳು ಹಾಗೆ ಅಸುರ ಯೋನಿಗಳಲ್ಲಿ ಹುಟ್ಟಬೇಕಾಗಿದೆ? ಎಷ್ಟು ಜನ್ಮಗಳಿಗೆ ಶಿಕ್ಷೆ ಮುಗಿದುಹೋಗುತ್ತದೆ? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಯಾವ ಶಿಕ್ಷೆಗಾದರೂ ಕಾಲಪರಿಮಿತಿ ಇರುವುದು ಹೊರಗಿನ ಕೋರ್ಟಿನಲ್ಲಿ ನೋಡಿದ್ದೇವೆ. ಹಾಗೆಯೇ ದೇವರ ಕೋರ್ಟಿನಲ್ಲಿ ದೇವರ ತೀರ್ಪಿನಲ್ಲಿಯೂ ಸಹ ಸ್ವಲ್ಪ ಕಾಲಪರಿಮಿತಿ ಇರುತ್ತದೆ ಎಂದು ಅಂದುಕೊಳ್ಳುತ್ತಿದ್ದೇವೆ. ಹೊರಗಿನ ಶಿಕ್ಷೆಗಳಿಗೆ ಒಂದೇ ಜನ್ಮದಲ್ಲಿ ಕೆಲವು ವರ್ಷಗಳ ಕಾಲ ಶಿಕ್ಷೆ ಜಾರಿಯಲ್ಲಿರುತ್ತದೆ. ಅದೇ ಒಳಗಿನ ಕೋರ್ಟಿನಲ್ಲಿ ದೈವಮಾರ್ಗದಲ್ಲಿ ತಪ್ಪುಮಾಡಿದವರಿಗೆ ವಿಧಿಸಲ್ಪಡುವ ಶಿಕ್ಷೆ ಕೆಲವು ಜನ್ಮಗಳೆಂದು ಶ್ಲೋಕದ ಭಾವನೆಯಲ್ಲಿಯೇ ತಿಳಿದುಹೋಗಿದೆ. ಎಷ್ಟು ಜನ್ಮಗಳ ಶಿಕ್ಷೆ ಇಲ್ಲವೆ ಎಷ್ಟುಕಾಲ ಶಿಕ್ಷೆ ಎಂದು ನೋಡಿದರೆ ಅದಕ್ಕೆ ಒಂದು ಆಧಾರ ಸಿಕ್ಕಿದೆ. ಒಂದು ಮೂಲ ಗ್ರಂಥದಲ್ಲಿ ಈ ವಿಧವಾಗಿ ಹೇಳಲಾಗಿದೆ. "ಮನುಷ್ಯರು ಮಾಡುವ ಪ್ರತಿ ಪಾಪವನ್ನು, ದೂಷಣೆಯನ್ನು ಕ್ಷಮಿಸಲ್ಪಡುತ್ತದಾಗಲಿ, ಆತ್ಮ ವಿಷಯವಾದ ದೂಷಣೆಗೆ ಪಾಪ ಕ್ಷಮಾಪಣೆ ಇಲ್ಲ. ಮನುಷ್ಯರಿಗೆ ವಿರುದ್ಧವಾಗಿ ಮಾತನಾಡುವವರಿಗೆ ಪಾಪ ಕ್ಷಮಾಪಣೆ ಇರುತ್ತದಾಗಲಿ, ಪರಮಾತ್ಮನಿಗೆ ವಿರುದ್ಧವಾಗಿ ಮಾತನಾಡುವ ವನಿಗೆ ಈ ಯುಗದಲ್ಲಿಯಾದರೂ, ಬರುವ ಯುಗದಲ್ಲಿಯಾದರೂ ಪಾಪಕ್ಷಮಾ ಪಣೆ ಇಲ್ಲ."

ಪ್ರಪಂಚ ವಿಷಯಗಳಲ್ಲಾಗಲಿ, ಪ್ರಪಂಚ ಮನುಷ್ಯರ ವಿಷಯಗಳಲ್ಲಾಗಲಿ ಪಾಪವನ್ನು ಮಾಡಿದ್ದರೆ, ಅಂತಹ ಪಾಪವನ್ನು ಜ್ಞಾನದಿಂದ ಸುಟ್ಟುಹಾಕಿಕೊಳ್ಳ ಬಹುದು. ಪ್ರಪಂಚ ಸಂಬಂಧವಾದ ಪಾಪಗಳನ್ನು ಮಾಡಿಕೊಂಡವನು

ಜ್ಞಾನಿಯಾಗಿ ಬದಲಾಗುವುದಕ್ಕೆ ಅವಕಾಶವಿದೆ. ದೈವಜ್ಞಾನವನ್ನು ತಿಳಿದುಕೊಂಡು ಜ್ಞಾನಿಯಾಗಿ ಬದಲಾದವನು ಎಷ್ಟು ದುರ್ಮಾರ್ಗನಾದರೂ, ಎಷ್ಟು ಪಾಪಾತ್ಮನಾದರೂ, ಅವನ ಪಾಪ ಜ್ಞಾನಾಗ್ನಿಯಿಂದ ದಹಿಸಲ್ಪಡುತ್ತದೆ. ಅಂತಹವನು ಸ್ವಲ್ಪ ಕಾಲದಲ್ಲಿಯೆ ಪಾಪಗಳಿಂದ ಹೊರಬೀಳುತ್ತಾನೆ. ಅಂತಹವನು ದುರ್ಮಾರ್ಗನೆಂದು ಹೆಸರು ತಂದುಕೊಂಡವನಾದರೂ, ನನ್ನ ಲೆಕ್ಕದಲ್ಲಿ ಅವನು ಸತ್ಪುರುಷನೆಂದೇ ಹೇಳಬಹುದು. ಇದೇ ವಿಷಯವನ್ನು ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗವೆಂಬ ಅಧ್ಯಾಯದಲ್ಲಿ 30ನೇ ಶ್ಲೋಕದಲ್ಲಿ ಹೇಳಲಾಗಿದೆ.

**30ನೇ ಶ್ಲೋ॥ ಅಪಿಚೇತ್ಸು ದುರಾಚಾರೋ ಭಜತೇ ಮಾ ಮನನ್ಯಭಾಕ್ ।**
**ಸಾಧುರೇವಸ ಮನ್ತವ್ಯಃ ಸಮ್ಯಗ್ವ್ಯ ವಸಿತೋಹಿಸಃ ॥**

**ಭಾವಾರ್ಥ :–** ಈ ಪ್ರಪಂಚದಲ್ಲಿ ದುರಾಚಾರಗಳಿಂದ ಕೂಡಿಕೊಂಡ ಎಂತಹ ದುರ್ಮಾರ್ಗನಾದರೂ, ಅನ್ಯಚಿಂತೆ ಇಲ್ಲದಂತೆ ನನ್ನನ್ನೇ ಆರಾಧಿಸುವವನನ್ನು ಸಾಧುವೆಂದು ಹೇಳಬಹುದು. ಏಕೆಂದರೆ ಅವನು ನಿಶ್ಚಯ ಜ್ಞಾನ ತಿಳಿದವನು."

ಪ್ರಪಂಚ ಸಂಬಂಧ ಪಾಪಗಳನ್ನು ಮಾಡಿಕೊಂಡವನು ತನ್ನ ಪಾಪಗಳನ್ನು ದೈವಜ್ಞಾನದಿಂದ ಇಲ್ಲದಂತೆ ಮಾಡಿಕೊಳ್ಳಬಹುದು, ಒಳ್ಳೆಯವನಾಗಿ ಹೇಳಬಹುದು. ಆದರೆ ದೈವ ಸಂಬಂಧವಾಗಿ ತಪ್ಪು ಮಾಡಿದವನಿಗೆ ಜ್ಞಾನ ತಿಳಿದುಕೊಳ್ಳುವ ಅವಕಾಶವೇ ಇರುವುದಿಲ್ಲವೆಂದು, ಜ್ಞಾನದ ದಡ ಮಾತ್ರ ಸಿಗದಂತೆ ಮಾಡುತ್ತೇನೆಂದು ದೇವರೇ ಹೇಳಿದ್ದಾನೆ. ಪ್ರಕೃತಿ ಸಂಬಂಧ ವಿಷಯಗಳಲ್ಲಿ ಪಾಪವನ್ನು ಹೊಂದಿದವನು ಪಾಪಕ್ಷಮಾಪಣೆ ಹೊಂದಬಹುದು. ದೈವಸಂಬಂಧ ವಿಷಯಗಳಲ್ಲಿ ಅಧರ್ಮವಾಗಿ ಪ್ರವರ್ತಿಸಿದವನಿಗೆ ಅಂತಹ ಅವಕಾಶವೇ ಇರುವುದಿಲ್ಲ. ದೇವರಿಂದ ತೀರ್ಪು ನಿರ್ಣಯಿಸಲ್ಪಟ್ಟವನಿಗೆ ಜ್ಞಾನದ ದಡ ಸಿಗುವುದಿಲ್ಲವೆಂದು ಹೇಳಿದ್ದಾನೆ. ಈ ವಿಧಾನ ಒಂದು ಹಿಂದುಗಳಿಗೆ ಅಲ್ಲದೆ ಉಳಿದ ಎಲ್ಲಾ ಸಮಾಜದವರಿಗೂ ಒಂದೇ ವಿಧವಾಗಿ ಅನ್ವಯಿಸುತ್ತದೆ. ಹಿಂದೂ ಸಮಾಜದಲ್ಲಿ ಇದ್ದು ನಾವು ಹಿಂದೂಗಳು ಎಂದು ಹೇಳುವ ಬಹಳ ಜನರಿಗೆ ಅವರ ಗ್ರಂಥವೇನೋ ಸಹ ತಿಳಿದಿಲ್ಲ. ಆದರೆ ಉಳಿದ ಸಮಾಜಗಳಾದ

ಮುಸ್ಲೀಮ್‌ರಿಗು, ಕ್ರೈಸ್ತರಿಗು ಅವರ ಗ್ರಂಥ ಇಂತಹದೆಂದು ಚೆನ್ನಾಗಿ ಗೊತ್ತು. ಮುಸ್ಲೀಮ್‌ರು ದೈವಜ್ಞಾನಕ್ಕೋಸ್ಕರ ಖುರ್‌ಆನ್ ಗ್ರಂಥವನ್ನೂ, ಕ್ರೈಸ್ತರು ಬೈಬಲ್ ಗ್ರಂಥವನ್ನು ನೋಡುವುದಲ್ಲದೇ ಬೈಬಲ್‌ಗೆ ಮುಂದೆ 'ಪರಿಶುದ್ಧ' ಎನ್ನುವ ಪದದಿಂದ ಪರಿಶುದ್ಧ ಬೈಬಲ್ ಎಂದೂ, ಖುರ್‌ಆನ್‌ಗೆ ಮುಂದೆ 'ಪವಿತ್ರ' ಅನ್ನುವ ಪದವನ್ನು ಇಟ್ಟು ಪವಿತ್ರ ಖುರ್‌ಆನ್ ಎಂದೂ ಗೌರವ ಪೂರ್ವಕವಾಗಿ ಹೇಳುತ್ತಿರುತ್ತಾರೆ. ಹಿಂದುಗಳು ಭಗವದ್ಗೀತೆಗೆ ಮೊದಲು ಅಂತಹ ಗೌರವ ಪದಗಳನ್ನು ಇಡಲಿಲ್ಲ. ಆದರೆ ಈಗ ನಾವು, ನಮ್ಮ ಅನುಚರರು ಭಗವದ್ಗೀತೆಗೆ ಮುಂದೆ "ಪರಮ ಪವಿತ್ರ ಪರಿಶುದ್ಧ ಎನ್ನುವ ಪದಗಳನ್ನು ಸೇರಿಸಿ, ಪರಮ, ಪವಿತ್ರ, ಪರಿಶುದ್ಧ ಭಗವದ್ಗೀತೆ' ಎಂದು ಹೇಳುತ್ತಿದ್ದೇವೆ. ಮುಂದೆ ಗೌರವ ಪದಗಳನ್ನು ನೋಡುವವರಿಗೆ ಆ ಗ್ರಂಥ ಎಂತಹದ್ದೋ ಓದದೆಯೇ ತಿಳಿಯಬಲ್ಲದು. ಗ್ರಂಥದ ಮುಂದೆ ಗೌರವ ಪ್ರದವಾದ ಹೆಸರುಗಳು ಇದ್ದರೂ, ಗ್ರಂಥಗಳಲ್ಲಿ ದೈವಜ್ಞಾನ ತುಂಬಿಸಲ್ಪಟ್ಟರೂ ಇತ್ತ ಕ್ರೈಸ್ತರು ಅತ್ತ ಮುಸ್ಲೀಮ್‌ರು ಅವರವರ ಗ್ರಂಥಗಳಿಂದ ಎಷ್ಟು ತಿಳಿಯಬೇಕೋ ಅಷ್ಟು ತಿಳಿಯಲಾರದೆ ಹೋಗಿದ್ದಾರೆಂದು ಹೇಳಬಹುದು.

ಇಂದೂಗಳ (ಹಿಂದುಗಳ) ಗ್ರಂಥವಾದ ಭಗವದ್ಗೀತೆ ಹಿಂದೂಗಳ ಹತ್ತಿರ ಇದ್ದರೂ, ಕೆಲವರು ಅದನ್ನು ಶ್ರದ್ಧೆಯಿಂದ ಓದಿದರೂ, ಅದರಲ್ಲಿನ ಜ್ಞಾನವನ್ನು ತಿಳಿದುಕೊಳ್ಳದೆ ಹೋಗುತ್ತಿದ್ದಾರೆ. ಜ್ಞಾನ ತಿಳಿಯದಂತೆ ಹೋಗುವುದೇ ಅಲ್ಲದೆ ಮೇಲಾಗಿ ಕೆಲವು ಸಂಶಯಗಳು ಏರ್ಪಡುತ್ತಿವೆ. ವಿಶ್ವರೂಪ ಸಂದರ್ಶನ ಯೋಗದಲ್ಲಿ ಯಜ್ಞಗಳನ್ನು ಮಾಡುವುದು ಅಧರ್ಮವೆಂದು, ಅವುಗಳಿಂದ ದೇವರು ತಿಳಿಯುವುದಿಲ್ಲವೆಂದು ಹೇಳಲಾಗಿದೆ. ಇದೇ ಯಜ್ಞಗಳನ್ನು ಕುರಿತು ಕರ್ಮಯೋಗವೆಂಬ ಅಧ್ಯಾಯದಲ್ಲಿ 10 ರಿಂದ 16 ಶ್ಲೋಕಗಳವರೆಗೂ ಯಜ್ಞಗಳು ಮಾಡಬೇಕು ಎಂದೂ, ಯಜ್ಞಗಳಿಂದಲೇ ದೇವತಾರಾಧನೆ ಮಾಡಬೇಕೆಂದು ಹೇಳುವುದಾಗಿದೆ. ಯಜ್ಞ ಮಾಡುವುದು ಮನುಷ್ಯನ ಕರ್ತವ್ಯವೆಂದು, ಯಜ್ಞಗಳು ಮಾಡದಿರುವುದು ಕಳ್ಳತನಕ್ಕೆ ಸಮಾನವೆಂದು 12ನೇ ಶ್ಲೋಕದಲ್ಲಿ ಇದೆ. ದೇವರು

ವೇದಗಳನ್ನು, ಯಜ್ಞಗಳನ್ನು, ತಪಸ್ಸುಗಳನ್ನು ಅಧರ್ಮಗಳಾಗಿ ವಿಶ್ವರೂಪ ಸಂದರ್ಶನ ಯೋಗದಲ್ಲಿ ಹೇಳಿದವನು, ಕರ್ಮಯೋಗದಲ್ಲಿ ಯಜ್ಞಗಳನ್ನು ತಪ್ಪದೆ ಮಾಡಬೇಕೆಂದು ಏಕೆ ಹೇಳಿದ್ದಾನೆ. ಪರಸ್ಪರ ವಿರುದ್ಧವಾದ ಮಾತುಗಳಲ್ಲಿ ಯಾವುದನ್ನು ನಂಬಬೇಕೋ ಎಂಬ ಸಂಶಯ ಬರುತ್ತದೆ. ಈ ವಿಧವಾದ ಅನುಮಾನಗಳು ಬಂದು ಬಹಳಜನರು ಗೀತೆಯಿಂದ ಏನು ತಿಳಿಯಲಾರದೆ ಹೋಗಿದ್ದಾರೆ. ಭಗವದ್ಗೀತೆಯನ್ನು ಓದಿದ ನಂತರ ಜ್ಞಾನ ತಿಳಿಯದೆ ಹೋಗುವುದಲ್ಲದೆ, ಅದಕ್ಕೂ ಮೊದಲು ಇಲ್ಲದ ಸಂಶಯಗಳು ಸಹ ಹುಟ್ಟಿಕೊಂಡು ಬರುವುದು ನಡೆದಿದೆ. ಐದು ಸಾವಿರ ವರ್ಷಗಳ ಕೆಳಗೆ ಹುಟ್ಟಿದ ಭಗವದ್ಗೀತೆ ಯಲ್ಲಿಯೇ ಇಂತಹ ಲೋಪಗಳಿವೆ ಎಂದು ಒಬ್ಬ ಇಂದೂವಾಗಿ (ಹಿಂದುವಾಗಿ) ನಾನು ಒಪ್ಪಿಕೊಳ್ಳುತ್ತಿದ್ದೇನೆ. ಅಂತಹ ಲೋಪಗಳು ಗೀತೆಯಲ್ಲಿ ಕಾಣಿಸದಂತೆ ಮಾಡುವುದಕ್ಕೆ ನಮ್ಮ ಕೈಲಾದ ಕೃಷಿ ಮಾಡಿದ್ದೇವೆ. ಲೋಪರಹಿತ ಭಗವದ್ಗೀತೆ ಯಾಗಿ **"ತ್ರೈತ ಸಿದ್ಧಾಂತ ಭಗವದ್ಗೀತೆ"**ಯನ್ನು ಲೋಕಕ್ಕೆ ತೋರಿಸಿದ್ದೇವೆ. ದೇವರ ಸೇವೆಯಲ್ಲಿ ಒಂದು ಭಾಗವಾಗಿ ಆ ಕಾರ್ಯವನ್ನು ಮಾಡಿದ್ದೇವೆ.

ಭಗವದ್ಗೀತೆಯಲ್ಲಿ ಸಹ ಮನುಷ್ಯರನ್ನು ಪಕ್ಕದಾರಿ ಹಿಡಿಸುವುದಕ್ಕೆ, ದೇವರ ಕಡೆ ಹೋಗದಂತೆ ಮಾಡುವುದಕ್ಕೆ, ಅಲ್ಲಲ್ಲಿ ಅನುಮಾನಗಳು ಬರುವಂತೆ ಮಾಯೆ ತನ್ನ ಜ್ಞಾನವನ್ನು ಸಹ ಗೀತೆಯಲ್ಲಿ ಇರಿಸಿದೆ. ದೇವರಿಗೆ ತಿಳಿಯದಂತೆ ಏನು ನಡೆಯುವುದಿಲ್ಲವೆಂದು ಜ್ಞಾಪಕವಿಟ್ಟುಕೊಳ್ಳಬೇಕು. ಭಗವದ್ಗೀತೆಯಲ್ಲಿ ಒಂದು ವಿಧವಾಗಿ ತನ್ನ ಪ್ರಭಾವವನ್ನು ತೋರಿಸಿದ ಮಾಯೆ (ಸಾತಾನ್) ಬೈಬಲ್ ಗ್ರಂಥದಲ್ಲಿ ಮತ್ತೊಂದು ವಿಧವಾಗಿ ತನ್ನ ಪ್ರಭಾವ ತೋರಿಸಿದೆ. ಬೈಬಲ್ ಗ್ರಂಥದಲ್ಲಿ ಸಾತಾನ್ ಪ್ರಭಾವ ಏನೋ ಯಾರಿಗೂ ತಿಳಿದಿಲ್ಲ. ಗೀತೆಯಲ್ಲಿ ಮಾಯೆ ಪ್ರಭಾವವೇನೋ ಇಲ್ಲಿಯವರೆಗೂ ಹಿಂದೂಗಳಿಗೂ ಸಹ ತಿಳಿದಿಲ್ಲ. ಮೊಟ್ಟಮೊದಲು ನಾವು ಇದು ಮಾಯೆ ಜ್ಞಾನವೆಂದು ಹೇಳಿದ್ದೇವೆ. ಅದೇ ವಿಧವಾಗಿ ಬೈಬಲ್‌ನಲ್ಲಿ ಸಹ ಮನುಷ್ಯನನ್ನು ದೇವರ ಮಾರ್ಗದಿಂದ ಹೇಗೆ ಪಕ್ಕ ದಾರಿಯೊಳಗೆ ಕಳುಹಿಸಬೇಕೋ, ಆ ವಿಧವಾದ ಏರ್ಪಾಟು ಮತ್ತೊಂದು

ವಿಧವಾಗಿ ಮಾಡಿಟ್ಟಿದೆ. ಆ ಸಾತಾನ್ ಪ್ರಯತ್ನ ನಾವು ಹೊರಗೆ ಹೇಳಲಾರದೆ ಹೋದರೂ, ಒಂದು ವಿಷಯವನ್ನು ಮಾತ್ರ ಮೊದಲಿನಿಂದ ಹೇಳುತ್ತಿದ್ದೇವೆ. ಬೈಬಲ್ 66 ಭಾಗಗಳಾಗಿ ಇದೆ. ಅದರಲ್ಲಿ ಯೇಸುಪ್ರಭು ಪ್ರತ್ಯಕ್ಷವಾಗಿ ಜೀವಿಸಿದಾಗ ಹೇಳಿದ ಮಾತುಗಳಿರುವ ಮತ್ತಾಯ, ಮಾರ್ಕು, ಲೂಕಾ, ಯೊಹಾನ್ ಎನ್ನುವ ನಾಲ್ಕು ಭಾಗಗಳು ಇವೆ. ಈ ನಾಲ್ಕು ಸುವಾರ್ತೆಗಳನ್ನು ಮಾತ್ರ ಓದಿರಿ ಉಳಿದ 62 ಭಾಗಗಳು ನಿಮಗೆ ಅಗತ್ಯವಿಲ್ಲ ಎಂದು ಹೇಳಿದ್ದೇವೆ. ಅರ್ಥ ಮಾಡಿಕೊಳ್ಳುವ ಶಕ್ತಿ ಇರುವವನಿಗೆ ಒಂದು ಯೋಹಾನ್ ಸುವಾರ್ತೆ ಸಾಕೆಂದು ಸಹ ಹೇಳಿದ್ದೇವೆ. ಆದರೂ ಕಿವುಡನ ಮುಂದೆ ಶಂಕು ಊದಿದಂತೆ ನಮ್ಮ ಮಾತನ್ನು ಯಾರೂ ಹಿಡಿಸಿಕೊಳ್ಳಲಿಲ್ಲ. ಮೇಲಾಗಿ ನಮ್ಮ ಕ್ರೈಸ್ತ ಗ್ರಂಥವನ್ನು ಕುರಿತು ಹಿಂದುವಾಗಿರುವ ಆತನಿಗೇನುತಿಳಿದಿದೆ ಎಂದು ಅಂದಿದ್ದಾರೆ. ಬೈಬಲ್‌ನಲ್ಲಿ ದೇವರ ಜ್ಞಾನವೇ ಅಲ್ಲದೆ, ಸಾತಾನ್ ಪ್ರಭಾವವೂ ಸಹ ಯಾರಿಗೂ ಕಾಣಿಸದಂತಿರುವಾಗ, ಖುರ್‌ಆನ್ ಗ್ರಂಥ ಮತ್ತೊಂದು ವಿಧವಾಗಿ ಇದೆ.

ಏನು ನಡೆದರೂ ದೇವರ ಅನುಮತಿಯಿಂದಲೇ ನಡೆಯುತ್ತದೆ. ದೇವರಿಗೆ ತಿಳಿಯದಂತೆ ಏನು ನಡೆಯುವುದಿಲ್ಲವೆಂದು ಜ್ಞಾಪಕ ಇಟ್ಟುಕೊಳ್ಳಬೇಕು. ಮುಸ್ಲೀಮ್‌ರನ್ನು ಸಹ ಸೈತಾನ್ (ಸಾತಾನ್ ಅಥವಾ ಮಾಯೆ) ಎನ್ನುವುದು ಪಕ್ಕದಾರಿ ಹಿಡಿಸುವುದಕ್ಕೆ ಪ್ರಯತ್ನ ಮಾಡಿದೆ. ಇಸ್ಲಾಮ್‌ನಲ್ಲಿಯೇ ಅಲ್ಲದೆ ಎಲ್ಲಾ ಮತಗಳಲ್ಲಿಯೂ ಅದರ ಪ್ರಭಾವವಿದೆ. ಮುಸ್ಲೀಮ್‌ರನ್ನು ಸೈತಾನ್ (ಮಾಯೆ) ಹೇಗೆ ಮೊಸಮಾಡುತ್ತಿದೆಯೋ, ದೇವರ ಮಾರ್ಗದಲ್ಲಿ ಇದ್ದೀಯಾ ಎಂದು ಹೇಳುತ್ತಾ ಹೇಗೆ ಪಕ್ಕದಾರಿ ಹಿಡಿಸುತ್ತಿದೆಯೋ, ನನಗೆ ತಿಳಿದರೂ ಅದನ್ನು ಹೊರಗೆ ಹೇಳುವುಕ್ಕೆ ನಾನು ಸಿದ್ಧವಾಗಿ ಇಲ್ಲ. ಏಕೆಂದರೆ ನನಗೆ ತಿಳಿದಿರುವುದು ಸತ್ಯವೊ ಅಲ್ಲವೊ. ಆದ್ದರಿಂದ ಅದು ನನ್ನವರೆಗೇ ಇರುತ್ತದೆ. ಆದರೂ ಮುಸ್ಲೀಮ್ ಸಮಾಜದಲ್ಲಿರುವವರಿಗೆ ನಾನು ಹೇಳುವುದೇನೆಂದರೆ! ಖುರ್‌ಆನ್ ನಿಜವಾಗಲು ದೈವ ಗ್ರಂಥ. ಅದರಲ್ಲಿನ 112ನೇ ಸುರಾದಲ್ಲಿನ ನಾಲ್ಕು ಆಯತ್‌ಗಳನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳಿ. ಆ ಒಂದು ಸುರಾದಿಂದಲೆ ದೇವರೆಂದರೆ ಏನೊ, ಎಷ್ಟು ಶಕ್ತಿ ಇರುವವನೋ ನಿಮಗೆ ತಿಳಿಯಬಲ್ಲದು.

ಇನ್ನೂ ಮುಖ್ಯವಾಗಿ ಹೇಳುವುದೇನೆಂದರೆ ಇಸ್ಲಾಮ್‌ನಲ್ಲಿ ಖುರ್‌ಆನ್ ಗ್ರಂಥವನ್ನು ಮೀರಿರುವುದು ಇಲ್ಲ. ಅಂತಹದರಲ್ಲಿ ನಿಮಗೆ ಹದೀಸುಗಳೇತಕ್ಕೆ? ಖುರ್‌ಆನ್ ಗ್ರಂಥದ ಪಕ್ಕದಲ್ಲಿ ಅದಕ್ಕೆ ಸಮಾನವಾಗಿ ಯಾವ ಗ್ರಂಥವನ್ನು ಸೇರಿಸಬೇಡಿ. ಸೈತಾನ್‌ಗೆ ತಮ್ಮನ್ನು ದೈವಮಾರ್ಗದಿಂದ ತಪ್ಪಿಸುವ ಅವಕಾಶ ಕೊಡಬೇಡಿ.

ಮಾಯೆಯನ್ನು ದೇವರೇ ಸೃಷ್ಟ್ಯಾದಿಯಲ್ಲಿಯೇ ತಯಾರು ಮಾಡಿದ್ದಾನೆ. ದೇವರ ಆಜ್ಞೆಯಿಂದಲೇ ಮಾಯೆ ಕೆಲಸ ಮಾಡುತ್ತಿದೆ. ದೇವರ ಶಕ್ತಿಯಿಂದ ಕೆಲಸ ಮಾಡುವ ಮಾಯೆ ಬಹಳ ಬಲಾಢ್ಯವಾದುದು. ದೇವರ ಮೇಲೆ ಶ್ರದ್ಧೆಯಿಲ್ಲದವನನ್ನು ದೇವರ ಕಡೆ ಬರಮಾಡುವುದಿಲ್ಲ. ದೇವರ ಮೇಲೆ ಇಷ್ಟವಿಲ್ಲದವರನ್ನು ದೇವರ ಕಡೆ ಹೋಗದಂತೆ ಮಾಡುವುದಕ್ಕೆ ಮಾಯೆ ಕಾವಲಾಗಿದ್ದು, ಎಲ್ಲಾ ಮತಗಳಲ್ಲಿಯೂ ಶ್ರದ್ಧೆಯಿಲ್ಲದವರನ್ನು ದೂರವಾಗಿ ಕಳುಹಿಸುವುದಕ್ಕೆ ಬೇಕಾದ ಏರ್ಪಾಟುಗಳೆಲ್ಲವೂ ಮಾಡಿಟ್ಟುಕೊಂಡಿದೆ. ಆ ಪ್ರಯತ್ನಗಳಲ್ಲಿನ ಭಾಗವೇ ಭಗವದ್ಗೀತೆಯಲ್ಲಿ ಅಧರ್ಮ ಶ್ಲೋಕಗಳು ಇವೆ. ಉಳಿದ ಎಲ್ಲಾ ಮತಗಳಲ್ಲಿ ಮಾಯೆ ಪ್ರಯತ್ನ ಕಾಣಿಸುತ್ತಲೇ ಇದೆ. ಈಗ ನಾವೊಂದು ಹಿಂದುಗಳ ಗ್ರಂಥವಾದ ಭಗವದ್ಗೀತೆಯಲ್ಲಿಯೇ ಅಲ್ಲದೆ ಹೊರಗೆ ವೇದಗಳಲ್ಲಿ, ಪುರಾಣಗಳಲ್ಲಿ ಮಾಯೆ ಹೆಚ್ಚಾಗಿ ತುಂಬಿಕೊಂಡಿದೆ. ಎಲ್ಲಾ ಮತದವರು ತಾವು ಸಕ್ರಮವಾಗಿ ಇದ್ದೇವೆಂದು ಅಂದುಕೊಳ್ಳುತ್ತಿದ್ದಾರಾಗಲಿ, ತಮ್ಮನ್ನು ಮಾಯೆ ಏನಾದರೂ ಯಾಮರಿಸಿದೆಯೇನೊ ಎಂದು ಯಾರೂ ನೋಡಿಕೊಳ್ಳುತ್ತಿಲ್ಲ. ಜಾಗ್ರತೆಯಾಗಿರುವವರನ್ನೇ ಬಿಡದಂತಹ ಮಾಯೆ, ಜಾಗ್ರತೆಯಾಗಿ ಇಲ್ಲದವರನ್ನು ಬಿಡುತ್ತದೆಂದುಕೊಳ್ಳುವುದು ತಪ್ಪು.

ಇಲ್ಲಿಯವರೆಗೂ ಹಿಂದೂಗಳನ್ನು ಕುರಿತು ಅವರು ಮಾಡುತ್ತಿರುವ ಅಧರ್ಮಗಳನ್ನು ಕುರಿತು ಹೇಳಿಕೊಂಡಿದ್ದೇವೆ. ಆದರೆ ದೇವರು ಹೇಳಿರುವುದು ಒಂದು ಹಿಂದುಗಳಿಗೇ ಅಲ್ಲ. ಆತನು ಸರ್ವಮಾನವರಿಗೂ ಅಧಿಪತಿ ಆಗಿರುವುದರಿಂದ, ಆತನ ಬೋಧನೆಗಳು ಸರ್ವಜೀವರಾಶಿಗಳಿಗೆ ಸಂಬಂಧಿಸಿರುವವಾದ್ದರಿಂದ, ಆತನ ತೀರ್ಪು ಎಲ್ಲರಿಗೂ ಒಂದೇ ವಿಧವಾಗಿ ಇರುತ್ತದೆ.

ಇದೆಲ್ಲವೂ ಸತ್ಯ ಪ್ರಕಟಣೆಗೋಸ್ಕರ ಹೇಳುವುದಾಗಲಿ, ಯಾರನ್ನು ಹೇಳನ ಮಾಡುವುದಕ್ಕಲ್ಲವೆಂದು ಮೊದಲೆ ತಿಳಿಸುತ್ತಿದ್ದೇವೆ. ಹಿಂದೂಗಳನ್ನು ಬಿಟ್ಟು ಕ್ರೈಸ್ತರನ್ನು ಮುಸ್ಲೀಮ್‌ರನ್ನು ನೋಡಿದರೆ, ಇಬ್ಬರಿಗೂ ದೇವರು ಒಂದೇ ಜ್ಞಾನವನ್ನು ಹೇಳಿದ್ದರೂ ಇವರಿಬ್ಬರಲ್ಲಿ ಮರಣದ ಬಗ್ಗೆ, ಹುಟ್ಟುವುದರ ಬಗ್ಗೆ ಬಹಳ ಅಭಿಪ್ರಾಯಭೇದಗಳಿವೆ. ಮನುಷ್ಯ ಮರಣಿಸಿದ ನಂತರ ಪುನಃ ಹುಟ್ಟುವುದಾಗಲಿ, ಬದುಕುವುದಾಗಲಿ ನಡೆಯುವುದಿಲ್ಲವೆಂದು ಮುಸ್ಲೀಮ್‌ರು ಅನ್ನುತ್ತಿರುವಾಗ, ಯೇಸುಪ್ರಭು ಮರಣಿಸಿ ಮತ್ತೆ ಬದುಕಿದ್ದಾನೆಂದು ಕ್ರೈಸ್ತರು ಅನ್ನುತ್ತಿದ್ದಾರೆ. ಹೇಗೆ ನೋಡಿದರು ನಮ್ಮ ಖುರ್‌ಆನ್ ಜ್ಞಾನವೇ ದೊಡ್ಡದೆಂದು ಮುಸ್ಲೀಮ್‌ರು, ಅಲ್ಲ ನಮ್ಮ ಬೈಬಲ್ ಜ್ಞಾನವೇ ದೊಡ್ಡದೆಂದು ಕ್ರೈಸ್ತರು ಎನ್ನುವುದು ನಡೆಯುತ್ತಿದೆ. ಎರಡು ಜ್ಞಾನಗಳು ಒಂದೇ ಆದರೂ ಅವುಗಳನ್ನು ಬೇರೆ ಬೇರೆಯಾಗಿ ಅರ್ಥವಾಗುವಂತೆ ಮಾಡಿ ಅಭಿಪ್ರಾಯ ಭೇದಗಳನ್ನು ಮಾಯೆ ಏರ್ಪಡಿಸಿದೆ ಎಂದು ಇಬ್ಬರೂ ಗ್ರಹಿಸಲಾರದೆ ಹೋಗಿದ್ದಾರೆ. ಇಬ್ಬರೂ ಒಬ್ಬರ ಜ್ಞಾನವನ್ನು ಮತ್ತೊಬ್ಬರು ಪ್ರತ್ಯಕ್ಷವಾಗಿ ನಿಂದಿಸಿಕೊಳ್ಳುವುದರಿಂದ ಪರೋಕ್ಷವಾಗಿ ದೇವರನ್ನು, ದೇವರ ಜ್ಞಾನವನ್ನು ನಿಂದಿಸಿದಂತಾಗುತ್ತಿದೆ. ಅದರಿಂದ ದೇವರ ನ್ಯಾಯಸ್ಥಾನದಲ್ಲಿ (ಕೋರ್ಟಿನಲ್ಲಿ) ಇಬ್ಬರೂ ದೋಷಿಗಳಾಗಿ ನಿಲ್ಲಬೇಕಾಗಿ ಬರುತ್ತದೆಂದು, ಶಿಕ್ಷೆ ಬೀಳುತ್ತದೆ ಎಂದು ಅವರಿಗೆ ಅರ್ಥವಾಗುತ್ತಿಲ್ಲ. ಎಲ್ಲಿ ಏನು ಮಾತನಾಡಿದರೂ ಫರವಾಗಿಲ್ಲವಾಗಲಿ, ದೇವರ ವಿಷಯದಲ್ಲಿ ಬಹಳ ಜಾಗ್ರತೆಯಾಗಿ ಮಾತನಾಡಬೇ ಕಾಗಿರುತ್ತದೆ ಎಂದು ಮರೆಯಬಾರದು.

ಮನುಷ್ಯರು ಮತವಾಗಿ ವಿಭಜಿಸಲ್ಪಟ್ಟಿದ್ದರೂ ದೇವರ ದೃಷ್ಟಿಯಲ್ಲಿ ಎಲ್ಲರೂ ಸಮಾನವೇ. ಯಾರು ತಪ್ಪು ಮಾಡಿದರೂ ಹಿಂದುಗಳಿಗೆ ಒಂದು ವಿಧದ ಶಿಕ್ಷೆ, ಮುಸ್ಲಿಮ್‌ರಿಗೆ ಒಂದು ವಿಧದ ಶಿಕ್ಷೆ ಇರುವುದಿಲ್ಲ. ಎಲ್ಲರಿಗೂ ಸಮಾನವಾದ ತೀರ್ಪು, ಸಮಾನವಾದ ಶಿಕ್ಷೆ ಇರುತ್ತದೆ. ದೇವರ ವಿಷಯದಲ್ಲಿ ಯಾರಾದರೂ ತಪ್ಪು ಮಾಡುತ್ತಿರುವಾಗ, ಅದು ತಪ್ಪು ಎಂದು ನಮಗೆ ತಿಳಿದರೆ, ಅದು ದೇವರ ವಿಷಯವಾಗಿರುವುದರಿಂದ, ತಪ್ಪು ಮಾಡುವವರನ್ನು ಜಾಗ್ರತೆಪಡಿಸುವುದು ಎಲ್ಲರ ಜವಾಬ್ದಾರಿ. ಆದ್ದರಿಂದ ನನಗೆ ತಿಳಿದಮಟ್ಟಿಗೆ

ದೇವರ ಮಾರ್ಗದಲ್ಲಿ ಮನುಷ್ಯ ಮಾಡುವ ತಪ್ಪುಗಳ ಬಗ್ಗೆ ಹೇಳುತ್ತಿದ್ದೇನೆ. ಖುರ್‌ಆನ್ ಗ್ರಂಥದಲ್ಲಿ ಅಲೀಇಮ್ರಾನ್ ಎನ್ನುವ ಮೂರನೆ ಸುರಾದಲ್ಲಿ ಏಳನೆ ಆಯತ್‌ನಲ್ಲಿ ಮುತಷಾಭಿಹಾತ್ ಎನ್ನುವ ವಾಕ್ಯಗಳು ಖುರ್‌ಆನ್ ಗ್ರಂಥದಲ್ಲಿ ಇವೆಯೆಂದು, ಆ ವಾಕ್ಯಗಳಿಗೆ ಅರ್ಥ ದೇವರು ಹೊರತು ಮತ್ತೆ ಯಾರು ತಿಳಿಯಲಾರರು ಎಂದು ಹೇಳಲ್ಪಟ್ಟಿದೆ. ಇದರಿಂದ ಯಾವ ಮನುಷ್ಯನಿಗೂ ಆ ವಾಕ್ಯಗಳ ಜ್ಞಾನ ತಿಳಿದಿಲ್ಲವೆಂದೇ ಅಲ್ಲವೇ ಅರ್ಥ. ದೇವರ ವಿಷಯ ದೇವರಿಗೆ ಹೊರತು ಇತರರಿಗೆ ಯಾರಿಗೂ ತಿಳಿಯದಿರುವಾಗ, ಮನುಷ್ಯರಿಗೆ ದೇವರು ಹೊರತು ಇತರರ್‍ಯಾರು ಬೋಧಿಸಲಾರರೆಂದೇ ಅಲ್ಲವೇ ಅರ್ಥ. ಎಲ್ಲಿಯಾದರೂ ದೇವರ ಧರ್ಮಗಳನ್ನು ಸಕ್ರಮವಾಗಿ ಯಾರಾದರೂ ಬೋಧಿಸುತ್ತಿದ್ದರೆ ಅವನನ್ನು ಮನುಷ್ಯ ಎನ್ನುವುದಕ್ಕೆ ಸಾಧ್ಯವಿಲ್ಲ. ಏಕೆಂದರೆ ಯಾವ ಮನುಷ್ಯನಿಗೂ ದೇವರ ಸೂಕ್ಷ್ಮಜ್ಞಾನ ತಿಳಿದಿಲ್ಲವೆಂದು ತನ್ನ ಗ್ರಂಥದಲ್ಲಿ ದೇವರೇ ಹೇಳಿದ್ದಾನೆ. ಭೂಮಿಮೇಲೆ ಮನುಷ್ಯರಿಗೆ ಜ್ಞಾನ ತಿಳಿಸುವುದಕ್ಕೆ ಯಾವ ಮನುಷ್ಯ ಯೋಗ್ಯನು ಅಲ್ಲದಿರುವಾಗ, ಯಾವ ಮನುಷ್ಯನಿಗೂ ದೇವರ ಜ್ಞಾನ ತಿಳಿಯದಿರುವಾಗ, ದೇವರೇ ಹೇಳಬೇಕಾಗಿ ಬರುತ್ತಿದೆ. ದೇವರು ಪ್ರತ್ಯಕ್ಷವಾಗಿ ಯಾರಜೊತೆ ಮಾತನಾಡುವುದಿಲ್ಲ ಎಂದು ಅದೇ ಖುರ್‌ಆನ್ ಗ್ರಂಥದಲ್ಲಿ 42ನೇ ಸುರಾ 51ನೇ ಆಯತ್‌ನಲ್ಲಿ ಇದೆ. ಅಂತಹದರಲ್ಲಿ ದೇವರು ಪ್ರತ್ಯಕ್ಷವಾಗಿ ಅಲ್ಲದೆ ಪರೋಕ್ಷವಾಗಿ ಮಾರುವೇಷದಲ್ಲಿ ಬಂದು ಮಾತನಾಡಬೇಕು. ಆತನು ಬಂದು ಹೇಳಿದಾಗ ಅಸಲಾದ ಜ್ಞಾನ ಪ್ರಜೆಗಳಿಗೆ ತಿಳಿಯುತ್ತದೆ. ಅಲ್ಲಿಯವರೆಗೂ ತಿಳಿಯುವುದಕ್ಕೆ ಅವಕಾಶವೇ ಇಲ್ಲ. ದೇವರು ಯಾವುದೋ ಒಂದು ವಿಧವಾಗಿ ಭೂಮಿಮೇಲೆ ಅವತರಿಸುತ್ತಾನೆ ಎನ್ನುವುದಕ್ಕೆ ಖುರ್‌ಆನ್ ಗ್ರಂಥದಲ್ಲಿಯೇ ಸಾಕ್ಷಿ ಇದೆ. ಸುರಾ 89, ಆಯತ್ 22ರಲ್ಲಿ "ದೈವದೂತರು ಸಾಲುಸಾಲಾಗಿ ನಿಂತಿರುವ ಸ್ಥಿತಿಯಲ್ಲಿ ದೇವರು ಅವತರಿಸುತ್ತಾನೆ. (23) ಆದಿನ ನರಕವು ಮುಂದಕ್ಕೆ ತೆಗೆದುಕೊಂಡು ಬರಲಾಗುವುದು. ಆ ದಿನ ಮನುಷ್ಯನಿಗೆ ಜ್ಞಾನೋದಯವಾಗುತ್ತದೆ. ಆದರೆ ಆ ದಿನ ಜ್ಞಾನಹೊಂದಿ ಏನು ಲಾಭ (24) ಅಯ್ಯೋ ನನ್ನ ಜೀವನಕ್ಕೋಸ್ಕರ ಮೊದಲೇ ಜಾಗ್ರತೆಹೊಂದಿ ಜ್ಞಾನ ತಿಳಿದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದು ಅಂದುಕೊಳ್ಳುತ್ತಾನೆ.

ಈ ಮೂರು ವಾಕ್ಯಗಳನ್ನು ನೋಡಿದರೆ ದೇವರು ಅವತರಿಸಿ ತಿಳಿ ಹೇಳಿದಾಗಲೇ ಮನುಷ್ಯನಿಗೆ ಜ್ಞಾನ ತಿಳಿಯುತ್ತದೆ ಎಂದು, ಹಾಗೆ ತಿಳಿದಾಗ ಇಷ್ಟು ಕಾಲ ಜ್ಞಾನದ ಮೇಲೆ ಶ್ರದ್ಧೆಯಿಲ್ಲದೆ ಕಾಲವನ್ನು ಎಷ್ಟು ವ್ಯರ್ಥ ಮಾಡಿಕೊಂಡಿದ್ದೇನೆಂದು ಅಂದುಕೊಳ್ಳುತ್ತಾನೆಂದು ಅರ್ಥವಾಗುತ್ತಿದೆ. ನನ್ನ ಜ್ಞಾನ ನನಗೆ ಹೊರತು ಯಾರಿಗೂ ತಿಳಿಯದು. ನಾನು ಅವತರಿಸಿ ಮನುಷ್ಯರಿಗೆ ಹೇಳುವಾಗ ಮನುಷ್ಯ ಜ್ಞಾನವನ್ನು ತಿಳಿದು ಪಶ್ಚಾತ್ತಾಪ ಪಡುತ್ತಾನೆಂದು ಖುರ್‌ಆನ್ ಗ್ರಂಥದಲ್ಲಿ ದೇವರು ಸೂಚನೆಯಾಗಿ ಹೇಳಿದ್ದರೂ, ದೇವರು ಎಂದಿಗೂ ಅವತರಿಸುವುದಿಲ್ಲ ಎನ್ನುವುದು ದೇವರ ಮಾತಿಗೆ ವಿರುದ್ಧ ಅಲ್ಲವೆ? ಹಾಗೆ ಮಾತನಾಡಿದವರು ಅಂತರಂಗ ನ್ಯಾಯಸ್ಥಾನದಲ್ಲಿ ಶಿಕ್ಷಾರ್ಹರು ಅಲ್ಲವೆ? 42ನೇ ಸುರಾ 51ನೇ ಆಯತ್‌ನಲ್ಲಿ ದೇವರು ಪ್ರತ್ಯಕ್ಷವಾಗಿ ಮಾತನಾಡುವುದಿಲ್ಲ ಎಂದು ಹೇಳಿ ತನ್ನ ಜ್ಞಾನವನ್ನು ಮೂರು ವಿಧಗಳಾಗಿ ಮನುಷ್ಯರಿಗೆ ತಿಳಿಸುತ್ತಾನೆ ಎಂದು ಇದೆ. ಅದರಲ್ಲಿ ಮೂರನೆಯದು ತನ್ನ ದೂತನ ಮೂಲಕ ತಿಳಿಸುತ್ತೇನೆಂದು ಅಂದಿದ್ದಾನೆ. ಆ ದೂತ ಯಾರೋ? ಯಾವ ಮುಸ್ಲಿಮ್ ಆದರೂ ಹೇಳುತ್ತಾನಾ? ಪುರುಷೋತ್ತಮ ಮಹಾರಾಜನ ಹತ್ತಿರಕ್ಕೆ ಅಲೆಗ್ಸಾಂಡರ್ ಚಕ್ರವರ್ತಿ ಹತ್ತಿರದಿಂದ ದೂತ ಬಂದನು. ಪುರುಷೋತ್ತಮನು ಮಹಾ ಧೈರ್ಯಶಾಲಿ. ಆತನು ಯಾರಿಗೂ ಬಗ್ಗಲಿಲ್ಲ. ಅಂತಹವನ ಜೊತೆ ಸಮಯಸ್ಫೂರ್ತಿಯಿಂದ ತಿಳುವಳಿಕೆಯಿಂದ ಮಾತನಾಡಬೇಕಾಗಿರುತ್ತದೆ. ಪುರುಷೋತ್ತಮನು ಕೇಳುವ ಪ್ರಶ್ನೆಗಳಿಗೆ ಆಗಿಂದಾಗೆ ಉತ್ತರ ಹೇಳಬೇಕಾಗಿರುತ್ತದೆ. ಅಂತಹದರಲ್ಲಿ ಸಾಧಾರಣ ದೂತ ಎಂತಹ ನಿರ್ಣಯವನ್ನು ತೆಗೆದುಕೊಳ್ಳುವುದಿಲ್ಲ. ಅವಶ್ಯಕತೆಯನ್ನು ನೋಡಿ ಮಾತನಾಡಬೇಕಾಗಿರುತ್ತದೆ. ಆದ್ದರಿಂದ ದೂತ ವೇಷದಲ್ಲಿ ಅಲೆಗ್ಸಾಂಡರೇ ಪುರುಷೋತ್ತಮನ ಹತ್ತಿರಕ್ಕೆ ಬಂದಿದ್ದಾನೆ. ಬಂದವನನ್ನು ದೂತನೆಂದು ಎಲ್ಲರೂ ಅಂದುಕೊಂಡರೂ ವಾಸ್ತವಕ್ಕೆ ಬಂದಿರುವ ವನು ಚಕ್ರವರ್ತಿಯೇ ಅಲ್ಲವೆ! ಹಾಗೆ ದೇವರು ಮಾರುವೇಷದಲ್ಲಿ ಮನುಷ್ಯನಂತೆ ಬಂದು ತನ್ನ ಜ್ಞಾನವನ್ನು ಬೋಧಿಸಿಹೋಗುತ್ತಾನೆ.

ಭಗವದ್ಗೀತೆ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ 11ನೇ ಶ್ಲೋಕದಲ್ಲಿ ಮೇಲಿನ ಮಾತಿಗೆ ಸಾಕ್ಷಿಯಾಗಿ ಹೀಗೆ ಇದೆ ನೋಡಿ.

**11ನೇ ಶ್ಲೋ॥ ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್।**
**ಪರಂ ಭಾವ ಮಜಾನನ್ತೋ ಮಮ ಭೂತ ಮಹೇಶ್ವರಮ್॥**

**ಭಾವಾರ್ಥ :–** " ಸರ್ವ ಜೀವರಾಶಿಗಳಿಗೂ ಸೃಷ್ಟಿಕರ್ತನಾದರೂ, ದೇವರಾದ ನಾನು ಮಾನವ ಶರೀರವನ್ನು ಧರಿಸಿ ಬಂದಾಗ ನನ್ನನ್ನು ನೋಡಿ, ನನ್ನೊಂದರ ದೈವಭಾವವನ್ನು ತಿಳಿಯಲಾರದೆ ನರರು ಮೂಢರಾಗುತ್ತಾ ನನ್ನನ್ನು ಅವಮಾನಿ ಸುತ್ತಾರೆ," ಈ ಭಾವದಲ್ಲಿನ ವಿಷಯವನ್ನು ನೋಡಿದರೆ ದೇವರು ಮನುಷ್ಯ ಶರೀರವನ್ನು ಧರಿಸಿ ಬರುವುದಿಲ್ಲವೆಂದು ಯಾರೂ ಹೇಳುವುದಕ್ಕೆ ಸಾಧ್ಯವಿಲ್ಲ. ಭಗವದ್ಗೀತೆಯಲ್ಲಿ ಸಹ ಧರ್ಮಗಳು ಭೂಮಿಮೇಲೆ ತಿಳಿಯದಂತೆ ಹೋದಾಗ ಅವುಗಳನ್ನು ತಿಳಿಸುವುದಕ್ಕೆ ಬರುತ್ತೇನೆಂದು ಹೇಳಿದ್ದಾನೆ. ಹಾಗೆ ಬಂದವನು ಯಾರಿಂದಲೂ ಗುರುತಿಸಲ್ಪಡದೆ ಮನುಷ್ಯನಂತೆ ನಟಿಸಿ, ಮನುಷ್ಯನಂತೆ ಜೀವಿಸಿ ಕೊನೆಗೆ ತನ್ನ ಜ್ಞಾನವನ್ನು ತಿಳಿಸಿ ಹೋಗುತ್ತಾನೆ. ಹಾಗೆ ಬಂದವನನ್ನು ಈತನು ಇಂತಹವನೆಂದು ಯಾರೂ ಗುರುತಿಸಲಾರರು. ತಾನು ಇಂತಹವನೆಂದು ಹೇಳಿದರೂ ದೇವರನ್ನು ಗುರುತಿಸಲಾರದ ಸ್ಥಿತಿಯಲ್ಲಿ ಮನುಷ್ಯನಿದ್ದಾನೆ. ಆದ್ದರಿಂದ ದೇವರು ಭಗವಂತನ ವೇಷದಲ್ಲಿ ಮನುಷ್ಯನಾಗಿ ಬಂದುಹೋ ಗುತ್ತಾನೆಂದು ಯಾರಿಗೂ ತಿಳಿದಿಲ್ಲ. ಭಗವದ್ಗೀತೆಯಲ್ಲಿ ನನ್ನ ಜ್ಞಾನವನ್ನು ತಿಳಿಸುವುದಕ್ಕೆ ಬರುತ್ತೇನೆಂದು, ಹಾಗೆ ಬಂದಿರುವ ನನ್ನನ್ನು ಯಾರೂ ಗುರುತಿಸದೆ ಸಾಧಾರಣ ಮನುಷ್ಯನಂತೆ ಭಾವಿಸಿ ಅಜ್ಞಾನಿಗಳಾದವರು ಅವಮಾನಿಸುತ್ತಾರೆಂದು ಸಹ ಹೇಳಿದ್ದಾನೆ.

ಬೈಬಲ್ ಗ್ರಂಥವನ್ನು ನೋಡಿದರೆ ಯೋಹಾನ್ 8ನೇ ಅಧ್ಯಾಯದಲ್ಲಿ 23ನೇ ವಾಕ್ಯ **"ನೀವು ಈ ಲೋಕ ಸಂಬಂಧಿಗಳು, ನಾನು ಈ ಲೋಕ ಸಂಬಂಧನು ಅಲ್ಲ."** ಎಂದು ಇದೆ. ಆ ಒಂದು ಮಾತಿನಿಂದ ಪ್ರಭುವಾಗಿ ಬಂದಿರುವವನು ಯಾರೋ ತಿಳಿಯಬಹುದು. ಆದರೆ ಮಾಯೆ ಯಾಮಾರಿಸಿ ಆತನನ್ನು

ಸಾಧಾರಣ ಮನುಷ್ಯನಾಗಿಯೇ ಅರ್ಥವಾಗುವಂತೆ ಮಾಡುತ್ತದೆ. ಒಂದು ಸಂದರ್ಭದಲ್ಲಿ (ಯೋಹಾನು 8–19ನೇ ವಾಕ್ಯದಲ್ಲಿ ) ಅವರು ನಿನ್ನ ತಂದೆ ಎಲ್ಲಿದ್ದಾನೆಂದು ಆತನನ್ನು ಕೇಳಿದಾಗ! ಯೇಸು ನೀವು ನನ್ನನಾದರೂ, ನನ್ನ ತಂದೆಯನ್ನಾದರೂ ತಿಳಿಯುವುದಿಲ್ಲ. ನನ್ನನ್ನು ತಿಳಿದಿದ್ದರೆ ನನ್ನ ತಂದೆಯನ್ನೂ ಸಹ ತಿಳಿಯುತ್ತೀರಾ ಎಂದು ಅವರ ಹತ್ತಿರ ಹೇಳಿದನು. ಈ 19ನೇ ವಾಕ್ಯದಲ್ಲಿ ನಾನು, ನನ್ನ ತಂದೆಯೆಂದು ವಿಭಜಿಸಿ ಹೇಳಿದ ಯೇಸು ಪಕ್ಕದಮಾತಿನಲ್ಲಿಯೇ ನನ್ನನ್ನು ತಿಳಿದವರು ನನ್ನ ತಂದೆಯನ್ನೂ ಸಹ ತಿಳಿದವರಾಗುತ್ತಾರೆಂದು ಹೇಳುವುದರಲ್ಲಿಯೂ ಸಹ ಬಂದವನು ಯಾರೋ ಅರ್ಥವಾಗುತ್ತದೆ. ಆದರೂ ಯಾರೂ ಆತನನ್ನು ಗುರುತಿಸಲಾರರು. ಇನ್ನೊಂದು ಕಡೆ (ಯೋಹಾನು 8, 24 ವಾಕ್ಯ) ನಾನು ಆತನೇ ಎಂದು ನೀವು ವಿಶ್ವಾಸಿಸದ ಪಕ್ಷದಲ್ಲಿ ನೀವು ನಿಮ್ಮ ಪಾಪದಲ್ಲಿಯೇ ಇದ್ದು ಮರಣಿಸುತ್ತೀರೆಂದು ಅವರಿಗೆ ಹೇಳಿದನು. ಈ ವಾಕ್ಯ ಪೂರ್ತಿ ಬಿಚ್ಚಿ ಹೇಳಿದಂತಿದೆ. ದೇವರನ್ನಾಗಲಿ, ದೇವರ ಜ್ಞಾನವನ್ನಾಗಲಿ ತಿಳಿದವನಿಗೆ ಪಾಪಗಳೆಲ್ಲಾ ನಶಿಸಿ ಕರ್ಮ ವಿಮುಕ್ತನಾಗುತ್ತಾನೆಂದು ಭಗವದ್ಗೀತೆಯಲ್ಲಿರುವಂತೆ ನಾನು ದೇವರೆಂದು ನಂಬದೆಹೋದರೆ ನಿಮ್ಮ ಪಾಪ ನಶಿಸುವುದಿಲ್ಲವೆಂದು ಹೇಳಿದ ಮಾತು ಭಗವದ್ಗೀತೆಯಲ್ಲಿ ಹೇಳಿದ ಮಾತಿಗೆ ಸಮಾನವಾಗುತ್ತಿದೆ. ದೇವರು ದೇವರಾಗಿ ಬರುತ್ತಾನೆಂದು ಎಲ್ಲಿಯೂ ಹೇಳಲಿಲ್ಲ. ದೇವರು ಭಗವಂತನಾಗಿ ಬರುತ್ತಾನೆಂದು ಹೇಳಿದ್ದಾನೆ. ತನ್ನ ಧರ್ಮಗಳನ್ನು ಬೋಧಿಸುವುದಕ್ಕೇ ಹಾಗೆ ಬರುತ್ತೇನೆಂದು ಹೇಳಿದ್ದಾನೆ. ಎಲ್ಲರಿಗೂ ದೇವರಾದ ನಾನು ಮಾನವ ಶರೀರವನ್ನು ಧರಿಸಿ ಬಂದರೆ ಅಜ್ಞಾನಿಗಳು ನನ್ನ ಶ್ರೇಷ್ಠತ್ವವನ್ನು ತಿಳಿದುಕೊಳ್ಳದೆ ಅವಮಾನಿಸುತ್ತಾರೆಂದೂ ಸಹ ಹೇಳಿದ್ದಾನೆ. ಸ್ವಲ್ಪ ಜ್ಞಾನ ಇರುವವನು ದೇವರ ಬರುವಿಕೆಯನ್ನು ಗುರುತಿಸುವುದಕ್ಕೆ ಅವಕಾಶ ವಿದ್ದರೂ ದೇವರು ಅವತರಿಸುವುದಿಲ್ಲ, ಅವತರಿಸಿದವನು ದೇವರು ಅಲ್ಲ ಎಂದರೆ ಅದು ದೇವರಿಗೆ ವಿರುದ್ಧವಾಗಿ ಮಾತನಾಡಿದಂತಲ್ಲವೆ! ದೇವರಿಗೆ ವಿರುದ್ಧವಾಗಿ ಮಾತನಾಡುವುದರಿಂದ ಮನುಷ್ಯ ಶಿಕ್ಷಾರ್ಹನಾಗುತ್ತಾನೆ.

ದೇವರಿಗೆ ಮತ, ಮತಸ್ಥನು ಎನ್ನುವ ತಾರತಮ್ಯ ಇರುವುದಿಲ್ಲ. ಯಾರಾದರೂ ಆತನ ಲೆಕ್ಕದಲ್ಲಿ ತಪ್ಪುಮಾಡಿದವರಾಗುತ್ತಾರೆ. ದೇವರು ಭೂಮಿಮೇಲಕ್ಕೆ ಮನುಷ್ಯರ ಮಧ್ಯದೊಳಗೆ ಬಂದಾಗ ಯಾರೂ ಆತನನ್ನು ಗುರುತಿಸಲಾರರು. ತನಗೆ ಸಮಾನವಾಗಿರುವ ಮನುಷ್ಯನನ್ನು ದೇವರಾಗಿ ಒಪ್ಪಿಕೊಳ್ಳುವುದಕ್ಕೆ ಎಲ್ಲಾ ಅಡ್ಡಬರುತ್ತವೆ. ಅವಾಗಾದ್ರೆ ಬೇಡ. ಆದರೆ ಆತನು ಬಂದುಹೋದ ನಂತರವಾದರೂ ಬಂದು ಜ್ಞಾನ ಹೇಳಿದವನು ಇಂತಹವನೆಂದು ಗುರುತಿಸದೆಹೋಗುವುದು ಅಜ್ಞಾನ ಅಲ್ಲವೆ! ಗುರುತಿಸದೆಹೋಗುವುದೇ ಅಲ್ಲದೆ ದೇವರು ಮನುಷ್ಯನಾಗಿ ಬರುವುದಿಲ್ಲ ಎಂದು ಹೇಳುತ್ತಾ ನಾನು ಬರುತ್ತೇನೆಂದು ಹೇಳಿದ ದೇವರ ಮಾತಿಗೆ ವಿರುದ್ಧವಾಗಿ ಹೇಳುವುದು ದೇವರ ಮಾತನ್ನು ಅವಹೇಳನ ಮಾಡಿದಂತೆ ಅಲ್ಲವೆ! ಇಂತಹವರಿಗೆ ತೀರ್ಪು ಇರುವುದಿಲ್ಲ ಎನ್ನುತ್ತೀರಾ! ಶಿಕ್ಷೆ ಬೀಳುವುದಿಲ್ಲ ಎನ್ನುತ್ತೀರಾ! ನಾವು ಇಲ್ಲಿಯವರೆಗು ಸಕ್ರಮವಾದ ಜ್ಞಾನವನ್ನೇ ಮಾತನಾಡಿದ್ದೇವೆ ಎಂದುಕೊಳ್ಳುವವರೆಲ್ಲಾ ಒಂದುಸಲ ಹಿಂದಿರುಗಿ ನೋಡಿಕೊಳ್ಳಿ. ನೀವು ಮಾಡಿರುವುದು ತಪ್ಪೋ ಒಪ್ಪೋ ತಿಳಿಯುತ್ತದೆ. ನಿಮಗೆ ತಿಳಿದರೂ ತಿಳಿಯದಿದ್ದರೂ ನೀವು ಕೊಳಚೆಯಲ್ಲಿ ಕಾಲು ಹಾಕಿದ್ದೀರಾ. ನೀವು ಹಾಕಿರುವುದು ನಿಜಕ್ಕೂ ತಪ್ಪೇ. ಈಗನಿಂದಾದರೂ ಮತ ಎನ್ನುವ ಮತ್ತಿನಿಂದ ಹೊರಬಿದ್ದು ನಿನ್ನ ದೇವರು ಎಷ್ಟು ದೊಡ್ಡವನೋ ತಿಳಿಯುವುದಕ್ಕೆ ಪ್ರಯತ್ನಿಸು. ಇಷ್ಟು ಹೇಳಿದರೂ ದೇವರು ಎಲ್ಲಿಯೋ ಮೇಲೆ ಇರುತ್ತಾನೆ, ಆತನು ಮನುಷ್ಯನಾಗಿ ಬರುವುದಿಲ್ಲ ಎಂದು ಎನ್ನುವವರನ್ನು ಯಾರೂ ರಕ್ಷಿಸಲಾರರು.

ಕ್ರೈಸ್ತ ಮತದಲ್ಲಿನ ಕ್ರೈಸ್ತರಲ್ಲಿ ಯೇಸುಪ್ರಭುವನ್ನು ಕುರಿತು ಭಿನ್ನಾಭಿಪ್ರಾಯ ಗಳು ಇವೆ. ಯೇಸು ಮೇಲೆಯೇ ಸರಿಯಾದ ಅಭಿಪ್ರಾಯ ಇಲ್ಲದವರು ಆತನು ಹೇಳಿದ ಬೋಧನೆಗಳ ಮೇಲೆ ಏಕಾಭಿಪ್ರಾಯದಿಂದ ಇರುತ್ತಾರೆಂಬ ನಂಬಿಕೆಯಿಲ್ಲ. ಯೇಸುವನ್ನು ಕುಮಾರನೆಂದೂ ದೇವರನ್ನು ತಂದೆ ಎಂದೂ ಕೆಲವರನ್ನುತ್ತಿದ್ದಾರೆ. ದೇವರ ಕುಮಾರನು ಯೇಸು ಎಂದು ಕೆಲವರನ್ನುತ್ತಿದ್ದರೂ, ಯೇಸುವನ್ನು ತಂದೆ ಎಂದು ಅನ್ನುತ್ತಿದ್ದಾರೆ. ಸ್ವತಃ ಯೇಸುವೇ ತನ್ನನ್ನು ಕಳುಹಿಸಿದವನು ದೇವರಾದ ತಂದೆ ಎಂದು ಹೇಳುವುದು ಬೈಬಲ್‌ನಲ್ಲಿ ಇದೆ.

ಅದರಿಂದ ಕೆಲವರು ದೇವರನ್ನು ತಂದೆ ಎಂದು ಯೇಸುವನ್ನು ಕುಮಾರನೆಂದು ಅನ್ನುವುದು ನಡೆಯುತ್ತಿದೆ. ದೇವರು ಎಲ್ಲರಿಗೂ ತಂದೆ ಆಗಿರುವುದರಿಂದ ಪ್ರಜೆಗಳಿಗೂ ಸಹ ದೇವರು ತಂದೆಯೆಂದು, ಆ ಲೆಕ್ಕಪ್ರಕಾರ ದೇವರಿಗೆ ಕುಮಾರನಾಗಿ ಹೇಳಲಾದ ಯೇಸು ಮನುಷ್ಯರಿಗೆ ಸೋದರನೆಂದು ಲೆಕ್ಕಿಸಿ, ಕ್ರೈಸ್ತರಲ್ಲಿ ಜ್ಞಾನಿಗಳಾಗಿ ಹೇಳಿಕೊಳ್ಳುವ ಕೆಲವರು ಪ್ರಭುವನ್ನು ನಮ್ಮ ಸೋದರನು ಎನ್ನುತ್ತಿದ್ದಾರೆ. ನಮಗಿಂತ ಮೊದಲು ಹುಟ್ಟಿದವನು ಆದ್ದರಿಂದ ನಮಗೆ ಅಣ್ಣ ಆಗುತ್ತಾನೆಂದು ಹೇಳುತ್ತಿದ್ದಾರೆ. ಅದೇ ನೇತೃತ್ವದಲ್ಲಿ ನಮ್ಮ ಅಣ್ಣನಾದ ಯೇಸು ಈ ವಿಧವಾಗಿ ಹೇಳಿದ್ದಾನೆಂದು ಆತನು ಹೇಳಿದ ಮಾತುಗಳನ್ನು ಹೇಳುತ್ತಿದ್ದಾರೆ. ದೇವರು ಅವಶ್ಯಕತೆ ಬಂದಾಗ ಮನುಷ್ಯನಾಗಿ ಬಂದು ತನ್ನ ಜ್ಞಾನವನ್ನು ಹೇಳಿ ಹೋಗುತ್ತೇನೆ ಎಂದು ಅನೇಕಸಲ ಹೇಳಿ, ಹಾಗೆಯೇ ಆತನಿಗೆ ಅವಶ್ಯಕತೆ ಬಂದಾಗ ಒಂದೊಂದು ಸಲ ಒಂದೊಂದು ರೂಪದಿಂದ, ಒಂದೊಂದುಸಲ ಒಂದೊಂದು ಹೆಸರಿನಿಂದ, ಒಂದೊಂದುಸಲ ಒಂದೊಂದು ವಿಧಾನದಿಂದ ಬಂದು ಲೋಕದಲ್ಲಿ ಮನುಷ್ಯ ಅಲ್ಲದಿದ್ದರೂ ಮನುಷ್ಯನಂತೆ ನಟಿಸಿ ಕೊನೆಗೆ ತನ್ನ ಜ್ಞಾನವನ್ನು ಹೇಳಿಹೋಗಿದ್ದಾನೆ. ಎಷ್ಟುಸಲ ಬಂದರೂ, ಎಷ್ಟು ಹೆಸರುಗಳು ಹೇಳಿದರೂ ಬಂದಿರುವವನೊಬ್ಬನೇ ಎನ್ನುವ ವಿಷಯವನ್ನು ಯಾರೂ ಗ್ರಹಿಸಲಾರದೆ ಹೋಗಿದ್ದಾರೆ. ಆತನು ಬಂದಾಗ ಹೇಳಿದ ಜ್ಞಾನ ಹೊರತು ಆತನ ಆಕಾರಗಳಾಗಲಿ, ಬಂದಾಗ ಹೇಳಿದ ಹೆಸರುಗಳಾಗಲಿ, ಆತನು ಹೇಳಿದ ಉಳಿದ ಮಾತುಗಳಾಗಲಿ ಎಲ್ಲಾ ಕಲ್ಪಿತಗಳೇ. ದೇವರು ತಂದೆ ತಾನು ಕುಮಾರನೆಂದು ಹೇಳಿರುವುದು ನಿನ್ನನ್ನು ಮಾಯೆಯಲ್ಲಿ ಹಾಕುವುದಕ್ಕೆ ಆಗಲಿ ಬೇರೆಯಲ್ಲ. ವಾಸ್ತವಕ್ಕೆ ತಂದೆ ಆತನೇ, ಕುಮಾರನು ಆತನೇ. ನಾನು ಇಂತಹವನೆಂದು ಆತನು ಕೆಲವು ಕಡೆ ಸತ್ಯ ಹೇಳಿದರೂ, ಮನುಷ್ಯನಿಗೆ ಆತನನ್ನು ಗುರುತಿಸುವ ಜ್ಞಾನ ಇಲ್ಲದಿರುವುದರಿಂದ ಕೆಲವುಕಡೆ ನಾನು ಬೇರೆ ದೇವರು ಬೇರೆಯೆನ್ನುವಂತೆ ಹೇಳಿದ್ದಾನೆ. ಅದೇ ಸಮಯದಲ್ಲಿಯೇ ನಾನು ಕುಮಾರನು, ನನ್ನ ತಂದೆ ದೇವರೆಂದಿದ್ದಾನೆ. ಆ ಮಾತಿನಿಂದ ಬಹಳ ಜನರು ದೇವರು ಬೇರೆ ಎಂದು, ಯೇಸು ಬೇರೆ ಎಂದು ಅಂದುಕೊಂಡಿದ್ದಾರೆ. ಯೇಸುಪ್ರಭು

ಹೇಳಿದ ಮಾತುಗಳು ಒಂದುಸಲ ತಾನೇ ದೇವರೆಂದು ಹೇಳಿ ಅಷ್ಟರಲ್ಲಿಯೇ ದೇವರು ಬೇರೆ ಎನ್ನುವಂತಿರುತ್ತದೆ. ವಾಸ್ತವಕ್ಕೆ ಆತನು ಕೆಲವುಕಡೆ ತನ್ನಷ್ಟಕ್ಕೆ ತಾನೇ ನಾನು ದೇವರೆಂದು ಸೂಚನೆ ಕೊಟ್ಟರೂ ಕುರುಡು ಪ್ರಜೆಗಳು ಆತನನ್ನು ಗುರುತಿಸದೆ ಹೋಗಿದ್ದಾರೆ.

ಗುರುತಿಸದೆ ಹೋದರೂ ಫರವಾಗಿಲ್ಲ ಆದರೆ, ತಾವು ಜ್ಞಾನಿಗಳೆಂದು ಹೇಳಿಕೊಳ್ಳುವ ಒಂದು ಗುಂಪಿನವರು ಯೇಸುನನ್ನು ನಮ್ಮ ಅಣ್ಣ, ನಮ್ಮ ಸೋದರನು ಎಂದು ಹೇಳುವುದು ವಿಚಿತ್ರವಾಗಿದೆ. ನಾನು ಯಾವಾಗಲೂ ಇರುವವನೆಂದು ದೇವರು ಹೊರತು ಯಾರಾದರೂ ಧೈರ್ಯವಾಗಿ ಹೇಳುವರಾ? ಮನುಷ್ಯ ಆದವನು ಯಾರೂ ಹೇಳಲಾರದ ಮಾತನ್ನು ಯೇಸು ಹೇಳಿದಂತೆ ಯೋಹಾನು ಸುವಾರ್ತೆ 8ನೇ ಅಧ್ಯಾಯದಲ್ಲಿ 57, 58 ವಾಕ್ಯಗಳಲ್ಲಿ ಇದೆ. (57) ನಿನಗಿನ್ನೂ ಐವತ್ತು ವರ್ಷಗಳಾದರೂ ಇಲ್ಲವೆ, ನೀನು ಅಬ್ರಹಮ್‌ನನ್ನು ನೋಡಿದೆಯಾ ಎಂದು ಆತನ ಹತ್ತಿರ ಹೇಳಿದಾಗ! (58) ಅಬ್ರಹಮ್ ಹುಟ್ಟುವುದಕ್ಕಿಂತ ಮೊದಲೇ ನಾನಿದ್ದೇನೆಂದು ನಿಮ್ಮಹತ್ತಿರ ನಿಶ್ಚಯವಾಗಿ ಹೇಳುತ್ತಿದ್ದೇನೆ ಎಂದನು. ನೋಡಿದೀರಾ! ಸಾಧಾರಣ ಮನುಷ್ಯ ಯಾರಾದರೂ ಹೀಗೆ ಹೇಳುತ್ತಾನಾ? ದ್ವಾಪರಯುಗದಲ್ಲಿ ಕೃಷ್ಣನು ಅರ್ಜುನನತ್ತಿರ ಸಹ ಹೀಗೆ ಹೇಳಿದ್ದಾನೆ. “ನೀನು ಈಗ ಹುಟ್ಟಿದ್ದೀಯಾ ಅಲ್ಲವೆ! ಸೂರ್ಯನು ಸೃಷ್ಟ್ಯಾದಿಯಲ್ಲಿ ಹುಟ್ಟಿದ್ದಾನೆ ಅಲ್ಲವೆ! ಆಗ ಆತನಿಗೆ ನೀನು ಹೇಗೆ ಜ್ಞಾನ ಹೇಳಿದ್ದೀಯಾ?” ಎಂದು ಅರ್ಜುನನು ಪ್ರಶ್ನಿಸಿದಾಗ! ಆಗ ಕೃಷ್ಣನು “ನಾನು ಆಗಲೂ ಇದ್ದೇನೆ ಈಗಲೂ ಇದ್ದೇನೆ, ನನಗೆ ಎಲ್ಲವೂ ಜ್ಞಾಪಕಗಳಿವೆ” ಅಂದನಂತೆ. ಈ ಮಾತುಗಳೆಲ್ಲವನ್ನು ಕ್ರೂಡೀಕರಿಸಿ ಸ್ವಲ್ಪ ಜ್ಞಾನದೃಷ್ಟಿಯಿಂದ ನೋಡಿದರೆ, ದೇವರ ಜ್ಞಾನ ದೇವರಿಗೇ ತಿಳಿದಿದೆ ಮತ್ಯಾರಿಗೂ ತಿಳಿದಿಲ್ಲ. ಆದ್ದರಿಂದ ದೇವರ ಜ್ಞಾನ ಭೂಮಿಮೇಲೆ ಇಲ್ಲದಂತೆ ಹೋದಾಗ, ದೇವರು ಮನುಷ್ಯನ ವೇಷದಿಂದ ಬಂದು ತಾನೇ ಜ್ಞಾನವನ್ನು ಹೇಳಿಹೋಗುತ್ತಾನೆಂದು ತಿಳಿಯುತ್ತಿದೆ. ದೇವರು ಸಹ ನಾನು ನಿಮ್ಮ ಮಧ್ಯದೊಳಗೆ ಧರ್ಮಗಳಿಗೆ ಮುಪ್ಪು ಬಂದಾಗ ಬಂದು

ಧರ್ಮಸಂಸ್ಥಾಪನೆ ಮಾಡಿ ಹೋಗುತ್ತೇನೆಂದು ಗೀತೆಯಲ್ಲಿ ಹೇಳಿದ್ದಾನೆ, ಬೈಬಲ್‌ನಲ್ಲಿ ಹೇಳಿದ್ದಾನೆ. ದೇವರು ಆ ವಿಧವಾಗಿ ಹೇಳಿರುವಾಗ! ದೇವರು ಅವತರಿಸುವುದಿಲ್ಲವೆಂದು ದೇವರ ಮಾತಿಗೆ ವಿರುದ್ಧವಾಗಿ ಹೇಳುವವರನ್ನು, ದೇವರು ಮನುಷ್ಯನಾಗಿ ಬಂದರೂ ಆತನನ್ನು ಗುರುತಿಸದೆ ಆತನನ್ನೇ ಅವಮಾನಿಸಿದವರನ್ನು, ದೇವರ ಕೋರ್ಟಿನಲ್ಲಿ ಪ್ರಕೃತಿ ಅಪರಾಧಿಯಾಗಿ ನಿಲ್ಲಿಸುತ್ತದೆ. ದೇವರು ಮನುಷ್ಯನಂತೆ (ಭಗವಂತನಾಗಿ) ಎದುರುಗಡೆ ಇದ್ದು ಮಾತನಾಡಿದರೂ ಲೆಕ್ಕಮಾಡದೆ ಅವಹೇಳನ ಮಾಡಿದವರನ್ನು, ತನ್ನ ಗ್ರಂಥಗಳಲ್ಲಿ ಎಷ್ಟು ಹೇಳಿದರೂ ತನ್ನ ಮಾತುಗಳನ್ನು  ಕೇಳಿಸಿಕೊಳ್ಳದೆ ಪಕ್ಕಕ್ಕೆ ಹೋಗಿ ದೇವರು ಮನುಷ್ಯನಂತೆ ಬರುವುದಿಲ್ಲ ಎನ್ನುವವರನ್ನು,  ದೇವರು ಒಂದೇ ಶಿಕ್ಷೆಗೆ ಗುರಿ ಆಗುವಂತೆ ದೇವರ ತೀರ್ಪು ನಡೆಯುತ್ತದೆ.

ಯಾವುದರಿಂದಾದರೂ ತಪ್ಪಿಸಿಕೊಳ್ಳಬಹುದಾಗಲಿ, ದೇವರ ತೀರ್ಪಿನಿಂದ ತಪ್ಪಿಸಿಕೊಳ್ಳುವುದಕ್ಕೆ ಯಾರಿಗೂ ಸಾಧ್ಯವಿಲ್ಲ. ಆಗ ತಿಳಿಯದೆ ಮಾತನಾಡಿದ್ದೇನೆ ಎಂದು ಹೇಳಿದರೂ, ನಮ್ಮ ಗುರು ಇಲ್ಲವೆ ಬೋಧಕನು ಹೇಳಿದ ಮಾತುಗಳನ್ನು ಕೇಳಿ ಆ ವಿಧವಾಗಿ ಮಾತನಾಡಿದ್ದೇನೆ, ಅದರಲ್ಲಿ ನನ್ನ ತಪ್ಪೇನು ಇಲ್ಲವೆಂದರೂ, ಮತ್ತುಪಾನೀಯ ಕುಡಿದು ಎಚ್ಚರವಿಲ್ಲದ ಸ್ಥಿತಿಯಲ್ಲಿ ಹಾಗೆ ಮಾತನಾಡಿದ್ದೇನೆಂದರೂ, ಯಾವ ವಿಧವಾಗಿ ಹೇಳಿದರೂ ನಿನ್ನ ಮಾತು ಕೇಳುವವರು ಯಾರೂ ಇರುವುದಿಲ್ಲ. ತೀರ್ಪು ನಡೆಯುತ್ತದೆ, ಶಿಕ್ಷೆ ಜಾರಿ ಆಗುತ್ತದೆ. ಆಗ ನೀನು ಜ್ಞಾನವನ್ನು ತಿಳಿದುಕೊಳ್ಳಬೇಕೆಂದರೂ ಅದು ಯಾವಕಾರಣಕ್ಕೂ ಸಿಗುವುದಿಲ್ಲ. ಎಷ್ಟು ಪ್ರಯತ್ನಿಸಿದರೂ ಜ್ಞಾನದ ದಡ ಸಿಗದಂತೆ ಹೋಗುತ್ತದೆ. ಆದ್ದರಿಂದ ಈಗಿನಿಂದ ದೇವರಿಗೆ, ದೇವರ ಜ್ಞಾನಕ್ಕೆ ವಿಧೇಯನಾಗಿರು.



**ಅಸತ್ಯವನ್ನು ಸಾವಿರಜನ ಹೇಳಿದರೂ ಅದು ಸತ್ಯವೂ ಅಲ್ಲ,**
**ಸತ್ಯವನ್ನು ಸಾವಿರಜನ ಅಲ್ಲ ಎಂದರೂ ಅದು ಅಸತ್ಯವೂ ಅಲ್ಲ.**

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ




**ದ್ರಾವಿಡ ಶ್ರೇಷ್ಠಿ ಸಂಘ (D.S.S)**

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),

ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ-509381

e-mail id : info@dravidashreshtisangham.org

***www.dravidashreshtisangham.org***

